

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಕ್ರಮಣ ಸಂಚಿಕೆ

ಸಂಪುಟ : ೪೫ | ಜನವರಿ ೨೦೦೯ | ಸಂಚಿಕೆ : ೧



ಲಿಂ. ಶ್ರೀ ಅಟವೀ ಸ್ವಾಮಿಗಳು



ಲಿಂ. ಶ್ರೀ ಉದ್ದಾನ ಸ್ವಾಮಿಗಳು



ಸಂಕ್ರಾಂತಿ ಹಾರ್ದಿಕ ಶುಭಾಶಯಗಳು



ಹಿರಿಯ ವಿದ್ವಾಂಸ, ಖ್ಯಾತ ಸಂಶೋಧಕ

## ಡಾ॥ ಎಲ್. ಬಸವರಾಜು

ಅಖಿಲ ಭಾರತ ೭೫ನೇ ಕನ್ನಡ ಸಾಹಿತ್ಯ ಸಮ್ಮೇಳನದ ನಿಯೋಜಿತ ಅಧ್ಯಕ್ಷರು

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104




॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೫ ಜನವರಿ ೨೦೦೮ ಸಂಚಿಕೆ : ೧

## ಒಳಪುಟಗಳಲ್ಲಿ ....................






ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ಮುಂಡದಲ್ಲಿ ಹುಟ್ಟಿದ ತಲೆ
ಕೆಂಡವ ಕಚ್ಚಿ ಕುಣಿದಾಡುವುದ ಕಂಡೆನಯ್ಯಾ
ಮುಂಡಬೆಂದು ತಲೆ ಉಳಿದು ಕೆಂಡ ಕೆದರಲಾಗಿ
ಅಖಂಡ ಪರಿಪೂರ್ಣ ಪರಕೆ ಪರ ತಾನಾದ
ಲಿಂಗೈಕ್ಯನನೇನೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಚತುರ್ವಿಂಶತಿ ತತ್ತ್ವಾತ್ಮಕ ದೇಹ ಸಂಬಂಧಿಯಾದಾತ್ಮನ ಮಧ್ಯದಲ್ಲಿ ಉದಯವಾದ ಸುಜ್ಞಾನ ಶಿರಸ್ಸು ಚಿದಗ್ನಿಸ್ವರೂಪವಾದ ಪರಬ್ರಹ್ಮನನು, ಗುರುಮುಖದಿಂದಂಗದಲ್ಲಿ ಸಂಬಂಧಿಸಿಕೊಂಡು, ಸರ್ವಾಚಾರ ಸಂಪತ್ತಿನಾಚರಣೆಯಲ್ಲಾಚರಿಸುವುದನು ಸ್ವಾನುಭಾವ ಜ್ಞಾನೋದಯವಾದ ಶರಣನು ತನಗೆ ತಾನೇ ನಿದರ್ಶನವ ಮಾಡಿತ್ತಿರ್ದನು.

ಅಂತಪ್ಪ ಲಿಂಗಸಂಬಂಧದಿಂದೆ ದೇಹಭಾವದ ವರ್ತನೆ ದಹನವಾಗಿ ಸುಜ್ಞಾನವೊಂದೆ ಅವಶೇಷಿತವಾಗಿ ಆ ಚಿದಗ್ನಿಸ್ವರೂಪವಾದ ಪರಬ್ರಹ್ಮವು ಸರ್ವಾಂಗಲಿಂಗ ಸಂಬಂಧವಾಗಲು, ಖಂಡಿತವಿಲ್ಲದೆ ಪೂರ್ಣವಾಗಿ ಅಧಿಕಕ್ಕಧಿಕವಾದ ಪರಬ್ರಹ್ಮವೆ ಸ್ವಯವಾದ ಲಿಂಗೈಕ್ಯನಂತಿಂತೆಂದು ಪಮಿಸಬಾರದು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಜಗದ ಕಣ್ಣಿಗೆ ನೀವು ಜಗದಂತೆ ಕಾಣುವಿರಿ
ಜಗದ ಒಳಹೊರಗನರಿತಿಹಿರಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಕಾಣಬಾರದಘನವ' ಕರತಲದಿ ಇರಿಸಿದೆ
ಹೇಳಬಾರದ ಘನವ ಮನತಲದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಶೂನ್ಯನು ನಾನು ಜ್ಞಾನಸಾಗರನೀವು
ಶೂನ್ಯ ಸಂಪಾದನೆಯ ಸಿರಿವಂತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಂಗಮವೆ ಜ್ಞಾನವು ಭಕ್ತನೆ ಆಚಾರವು
ಅನುಭಾವವೆ ಅನುಪಮ ಲಿಂಗವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿತ್ಯಾನಂದ ಸಿರಿಭಕ್ತಿ ಲೀಲಾಲೋಲ
ಸತ್ಯಶಿವಪ್ರಣವ ದಾಸೋಹಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಧ್ಯಾನಮೂಲನೀವೆ ಪೂಜೆ ಮೂಲ ನೀವೆ
ಮಂತ್ರಪಠಣ ಮೂಲಪ್ರಣವವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಧಿಕರಾರನು ಕಾಣೆ ನಿಮ್ಮಿಂದಧರೆಯೊಳಗೆ
ಅಧಿಕರಾರನು ಕಾಣೆಯುಗದೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಜುವೆನಂಜುವೆ ನಿಮ್ಮ ನುಡಿ ಲಿಂಗಕೆ
ಅಂಜುವೆ ನಂಜುವೆ ಚರಣಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಂದಿಪರ ಪ್ರೀತಿಸುವೆ ವಂದಿಪರ ಪ್ರೀತಿಸುವೆ
ಪ್ರೀತಿಸುವೆ ಹಿಂದೆ ಆಡಿಪರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣ ಸಿರಿಗಂಧವೆ ಜಂಗಮಸಿರಿಬಿಲ್ವವೆ
ಮಾನವೀಯತೆಯ ಸಿರಿಮಾವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಅಧ್ಯಾತ್ಮ

ವಿಶ್ವದ ಅತಿದೊಡ್ಡ ಪ್ರಜಾಪ್ರಭುತ್ವವನ್ನು ಹೊಂದಿರುವ ದೇಶ ನಮ್ಮದು. ಸಂವಿಧಾನಾತ್ಮಕವಾಗಿ ಆಡಳಿತ ನಡೆಯುವಂಥದು. ಆಧ್ಯಾತ್ಮ ಭಾರತದ ಹೃದಯ ಆ ಆಧ್ಯಾತ್ಮ ನಾಗರಿಕತೆ ಸಂಸ್ಕೃತಿಗಳನ್ನು ಸಂಸ್ಕರಿಸಿದಂಥದು. ಭೌತ ಜಗತ್ತಿನ ಪ್ರಗತಿ ಆಧ್ಯಾತ್ಮಿಕದ ತಾಯಿಬೇರಿನ ಸಿರಿಬೆಳೆ. ನಮ್ಮ ಋಷಿಮುನಿಗಳು, ದಾರ್ಶನಿಕರು, ಸಂತರು, ಶರಣರು, ಅನುಭಾವಿಗಳು ಇಹವನ್ನು ಪ್ರೀತಿಸುತ್ತಲೇ ನೂರು ವರ್ಷಗಳನ್ನು ಕಂಡುಂಡವರು. ಅವರೆಂದೂ 'ಇಹ'ವನ್ನು ತಿರಸ್ಕರಿಸಲಿಲ್ಲ. ತಮ್ಮ ಆತ್ಮಾನುಭೂತಿಯಿಂದ 'ಇಹ'ವನ್ನು ತುಂಬಿದರು, ಸಂಪದ್ಭರಿತಗೊಳಿಸಿದರು. **"ಕುರ್ವನ್ನೇವೇಹ ಕರ್ಮಾಣಿ ಜಿ ಜೀವಿಷೇಚ್ಛತಂಸಮಾಃ । ಏವಂ ತ್ವಯಿ ನಾನ್ಯಥೇ ತೋಸ್ತಿ ನ ಕರ್ಮ ಲಿಪ್ಯತೇ ನರೇ".** – ಎಂದೇ ಕರ್ಮಶೀಲರಾಗಿಯೇ ನೂರು ವರ್ಷ ಬಾಳುವ ಇಚ್ಛೆಯುಳ್ಳವರಾಗಿದ್ದರು. ಅದು ಅವರ ಶಿವಪಥ. ಬೇರೆ ಪಥವೇ ಇರಲಿಲ್ಲ. ಹೀಗೆ ಬಾಳುವುದರಿಂದ ಕರ್ಮಲೇಪವಾಗುವುದಿಲ್ಲ ಎಂಬುದನ್ನರಿತಿದ್ದರು. ನೂರು ಸಂಕ್ರಮಣಗಳನ್ನು ಕಂಡವರು, ಕಂಡು ಸಂಕ್ರಮಿಸಿದವರು, ಸಂಕ್ರಾಂತಿಯನ್ನು ತುಂಬಿದಂಥವರು. ಜೀವನದ ವಿಮುಖತೆಯನ್ನು ಉಪನಿಷತ್ತುಗಳಾಗಲೀ, ದರ್ಶನಗಳಾಗಲೀ, ಮಹಾಕಾವ್ಯಗಳಾಗಲೀ, ಶಿಲ್ಪಗಳಾಗಲೀ, ಕಾವ್ಯಾದಿ ನಾಟಕಗಳಾಗಲೀ, ವಿಜ್ಞಾನವಾಗಲೀ ಬೋಧಿಸುವುದಿಲ್ಲ. ಕಾಯಕ ಶೀಲರಾಗಿ ದಾಸೋಹಜೀವಿಗಳಾಗಿ ಸಕಲಜೀವಿಗಳಿಗೆ ಲೇಸನೇ ಬಯಸುವವರಾಗಿ ಬಾಳಿ ಎನ್ನುತ್ತದೆ ಆಧ್ಯಾತ್ಮ. ಆತ್ಮನ ಪೂರ್ಣಸ್ವರೂಪವನ್ನರಿಯುವುದೇ ಆಧ್ಯಾತ್ಮ. ಅದು ನಿಷ್ಕ್ರಿಯವಾದುದಲ್ಲ. ತುಂಬು ಬಾಳನ್ನು ಬೆಳಗುವಂಥದು. ಇಲ್ಲಿ ಸಲ್ಲುವಂತೆ ಬಾಳುವಂಥದು. ಬಾಳ್ವೆಯೇ ಬೆಳಕು ಎಂಬ ಪೂರ್ಣತೆಯನ್ನು ಅನುಭವಿಸುವಂಥದು. 'ಜೀವರಥೋತ್ಸವವಿದನಣಕಿಸದಿರು' ಎನ್ನುತ್ತದೆ ಆಧ್ಯಾತ್ಮ. ಆಧ್ಯಾತ್ಮವನ್ನನುಭವಿಸುವುದಕ್ಕೆ ಪದವಿ ಬೇಕಿಲ್ಲ, ಪಟ್ಟ ಬೇಕಿಲ್ಲ, ಕಾವಿ ತೊಡಬೇಕಾಗಿಲ್ಲ, ನಿರ್ಮಲವಾದ, ಪ್ರಶಾಂತವಾದ ಮನಸ್ಸು ಸಾಕು. ಪ್ರಕೃತಿಯ ಒಂದು ಹುಲ್ಲೆಸಳಿನಲ್ಲಿ ಆಧ್ಯಾತ್ಮ ದರ್ಶನವನ್ನು ಕಾಣಬಹುದು. ಆದಕ್ಕೆ ಬೇಕಾದುದು ಚಿತ್ತ ಪ್ರಶಾಂತ ಚಿತ್ತ .

*

## ಅಭಿನಂದನೆ

ಡಾ|| ಎಲ್. ಬಸವರಾಜು ಅವರು ದಿನಾಂಕ ೨೯-೦೧-೨೦೦೯ರಂದು ಚಿತ್ರದುರ್ಗದಲ್ಲಿ ಆಯೋಜಿತವಾಗಿರುವ ಎಪ್ಪತ್ತೈದನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾಗಿರುವುದು 'ಸಿದ್ಧಗಂಗಾ'ಕ್ಕೆ ತುಂಬು ಸಂತೋಷವನ್ನುಂಟುಮಾಡಿದೆ. ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತನ್ನು ಚಿತ್ರದುರ್ಗ ಜಿಲ್ಲಾ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯನ್ನು, ಶ್ರೀಯುತರನ್ನು ಆಯ್ಕೆ ಮಾಡಿದುದಕ್ಕಾಗಿ ವಂದಿಸುತ್ತದೆ.

ಡಾ|| ಎಲ್. ಬಸವರಾಜು ಅವರು ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳು. ಕನ್ನಡ ಸಾರಸ್ವರ ಲೋಕದ ವಿದ್ವನ್ಮಣಿಗಳು. ಮೈಸೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಮೂರು ದಶಕಗಳಿಗೂ ಹೆಚ್ಚು ಸೇವೆ ಸಲ್ಲಿಸಿ ಸಾವಿರಾರು ಪ್ರತಿಭಾವಂತ ಶಿಷ್ಯರನ್ನು ರೂಪಿಸಿದವರು. ಸೃಜನಶೀಲ ಬರಹಗಾರರನ್ನು ಬೆಳೆಸಿದವರು. ಕನ್ನಡಕ್ಕಾಗಿ ಜೀವನವನ್ನು ಮುಡುಪಿಟ್ಟು ದುಡಿಯುತ್ತ ಬಂದವರು. ಹುಟ್ಟಿದ್ದು ಕೋಲಾರ ಜಿಲ್ಲೆ ಇಡಗೂರಿನಲ್ಲಿ. ತಂದೆ ಲಿಂಗಪ್ಪ, ತಾಯಿ ಈರಮ್ಮ. ೦೫-೧೦-೧೯೧೯ರಲ್ಲಿ ಜನನ. ಇಡಗೂರಿನಲ್ಲಿ ಪ್ರಾಥಮಿಕ ಶಿಕ್ಷಣ. ಶ್ರೀಮಠ ಸಿದ್ಧಗಂಗಾದಲ್ಲಿ ಪ್ರೌಢ ಶಿಕ್ಷಣ ಇಂಟರ್‌ಮೀಡಿಯಟ್ ಬೆಂಗಳೂರಿನಲ್ಲಿ. ಎಂ.ಎ. ಮೈಸೂರಿನಲ್ಲಿ. ದಾವಣಗೆರೆಯ ಡಿ.ಆರ್.ಎಂ. ಕಾಲೇಜು ವೃತ್ತಿ ಜೀವನದ ಶಿವಸೋಪಾನ. ಅಲ್ಲಿಂದ ಮೈಸೂರು ಯುವರಾಜ ಕಾಲೇಜು, ಮಾನಸಗಂಗೋತ್ರಿಗಳಲ್ಲಿ ಅಧ್ಯಾಪನ. 'ಅಲ್ಲಮನ ವಚನ ಚಂದ್ರಿಕೆ, ಶಿವದಾಸಗೀತಾಂಜಲಿ' ಸಂಶೋಧನಾ ಗ್ರಂಥಗಳಿಗೆ ೧೯೬೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ದಿಂದ ಗೌರವ ಡಿ.ಲಿಟ್ ಪದವಿ. ೧೯೭೯ರಲ್ಲಿ ಸೇವಾ ನಿವೃತ್ತಿ.

ಗ್ರಂಥ ಸಂಪಾದನೆ ಹಾಗೂ ಸಂಶೋಧನಾ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಸೇವೆ ಅವಿಸ್ಮರಣೀಯ. ಬಸವಣ್ಣನವರ ವಚನಗಳು, ಅಕ್ಕನ ವಚನಗಳು, ಸರ್ವಜ್ಞನ ವಚನಗಳು, ದೇವರ ದಾಸಿಮಯ್ಯನವರ ವಚನಗಳು, ಡಾ|| ಬಸವರಾಜುರವರು ಸಂಪಾದಿಸಿದ ಕೆಲವು ಕೃತಿಗಳು. ಶಿವದಾಸ ಗೀತಾಂಜಲಿ, ಶಿವಗಣ ಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ ಶ್ರೀಯುತರ ವಿದ್ವತ್ತನ್ನು ಎತ್ತಿ ಹಿಡಿದ ಕೃತಿರತ್ನಗಳು.

ಛಂದಸ್ಸಂಪುಟ, ಆದಿಪುರಾಣ, ಪಂಪಭಾರತ, ಶಬ್ದಮಣಿ ದರ್ಪಣಗಳು ಹಳಗನ್ನಡ ವಿದ್ವತ್‌ಪ್ರೇಮದ ಸುಳಿವ ಶಾಸನಗಳು. ಬಸವಣ್ಣನವರ ವಚನಗಳು ಸಹಚಿಂತನ ವಚನಾಭ್ಯಾಸಿಗಳಿಗೆ ಸ್ತಂಭದೀಪ. ಹೊಸಗನ್ನಡದಲ್ಲಿ ಅರಳಿದ ಸಿದ್ಧರಾಮ ಚರಿತ್ರೆ, ಹರಿಶ್ಚಂದ್ರ ಕಾವ್ಯ ರಾಘವಾಂಕನಿಗೆ ಸಲ್ಲಿಸಿದ ಭಕ್ತಿಪುಷ್ಪಗಳು. ಕಲ್ಯಾಣ ಮಾಯಿದೇವನ ಶಿವಾನುಭವ ಸೂತ್ರ, ವೀರಶೈವ ತತ್ವ ಮತ್ತು ಆಚರಣೆಗಳು ವೀರಶೈವ ಸಿದ್ಧಾಂತ ಗ್ರಂಥಗಳ ಪರಿಷ್ಕರಣೆ ಮತ್ತು ವ್ಯಾಖ್ಯಾನಗಳು.

ಅನುವಾದಕರಾಗಿಯೂ ಶ್ರೀಯುತರು ಮೌಲಿಕ ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿದ್ದಾರೆ. ಅಶ್ವಘೋಷನ 'ಬುದ್ಧಚರಿತೆ' 'ಸೌಂದರಾನಂದ' ಮಹಾಕಾವ್ಯಗಳನ್ನು ಕನ್ನಡಕ್ಕೆ ರೂಪಾಂತರಿಸಿದ್ದಾರೆ. ಭಾಸನ 'ಪ್ರತಿಮಾ' 'ಅಭಿಷೇಕ' ನಾಟಕಗಳನ್ನು ಭಾರತ ಆಧಾರಿತ 'ಮಧ್ಯಮವ್ಯಾಯೋಗ, ಪಂಚರಾತ್ರ, ದೂತವಾಕ್ಯ, ಕರ್ಣಭಾರ, ಊರುಭಂಗ, ಹರ್ಷನ 'ನಾಗಾನಂದ' ಕಾಳಿದಾಸನ ಶಾಕುಂತಲ, ಭವಭೂತಿಯ ಉತ್ತರರಾಮ ಚರಿತೆಗಳನ್ನು ಕನ್ನಡೀಕರಿಸಿದ್ದಾರೆ.

ಕವಿಯಾಗಿ ಡಾ|| ಎಲ್. ಬಸವರಾಜು ಅವರು 'ರಾಣಾಂತರ, ಜಾಲಾರಿ, ಡೊಂಕುಬಾಲದ ನಾಯಕರು' ಕೃತಿಗಳನ್ನು ನೀಡಿದ್ದಾರೆ.

ಅನೇಕ ಪ್ರಶಸ್ತಿ ಪುರಸ್ಕಾರಗಳಿಂದ ಗೌರವಿತರಾಗಿರುವ ಡಾ|| ಎಲ್. ಬಸವರಾಜು ಅವರು ಪಂಪಪ್ರಶಸ್ತಿ, ಬಸವ ಪುರಸ್ಕಾರ, ರಾಷ್ಟ್ರೀಯ ಸಮ್ಮಾನ, ಕೇಂದ್ರ ಸಾಹಿತ್ಯ ಅಕಾಡೆಮಿ ಭಾಷಾ ಸಮ್ಮಾನ, ಪ್ರೊ. ಸ.ಶಿ. ಭೂಸನೂರಮಠ ಪ್ರಶಸ್ತಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಚಾವುಂಡರಾಯ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಆಕಾಡೆಮಿ ಪ್ರಶಸ್ತಿ, ನಾಡೋಜ ಪ್ರಶಸ್ತಿಗಳು ಶ್ರೀಯುತರ ಸಾಹಿತ್ಯಸೇವೆಗೆ ಸಂದಿವೆ.

ಡಾ|| ಬಸವರಾಜು ಅವರದು ವಿಶಿಷ್ಟಮಾರ್ಗ, ದಿಟ್ಟ ಹೆಜ್ಜೆ, ಧೀರನಡೆ, ಸ್ವಾಭಿಮಾನದ ಸಾತ್ವಿಕ ವಜ್ರ, ವೀರಶೈವದ ಗಣಾಚಾರ ಪಥಗಾಮಿತ್ವ ವಿನಯ ಸೌಜನ್ಯಗಳ ರತ್ನಗಣಿ. ಶ್ರೀಯುತರನ್ನು ಸಮ್ಮೇಳನಾಧ್ಯಕ್ಷರನ್ನಾಗಿ ಆಯ್ಕೆಯಾದುದನ್ನು ತಿಳಿದು 'ಸಿದ್ಧಗಂಗಾ' ದೂರವಾಣಿ ಮೂಲಕ ಅಭಿನಂದಿಸಿದಾಗ 'ನಾನು ಶ್ರೀಗಳವರ ಪಾದದ ಧೂಳು, ಈ ದಿನ ಬಸವರಾಜು ಏನಾದರೂ ಆಗಿದ್ದರೆ ಅದು ಪೂಜ್ಯರ ಆಶೀರ್ವಾದ' – ಎಂಬ ವಿನಯ ನುಡಿಗಳು ಅವರಿಂದ.

'ಸಿದ್ಧಗಂಗಾ' ತುಂಬು ಹೃದಯದಿಂದ ಅಭಿನಂದಿಸುತ್ತದೆ.

೨೦೦೮ರಲ್ಲಿ ಪತ್ರಿಕೆಯ ಮುನ್ನಡೆಗೆ ಸಹಕರಿಸಿದ ಲೇಖಕರಿಗೆ, ಜಾಹಿರಾತುದಾರರಿಗೆ, ಆಜೀವಸದಸ್ಯರಿಗೆ, ಚಂದಾದಾರರಿಗೆ ವಂದನೆಗಳನ್ನು ಸಲ್ಲಿಸುತ್ತಾ ೨೦೦೯ಕ್ಕೆ ಶುಭ ಕೋರುತ್ತದೆ.

– ಸಂಪಾದಕ





## ಪ್ರಕಟಣೆ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಕರ್ನಾಟಕ ರತ್ನ, ತ್ರಿವಿಧ ದಾಸೋಹಿ,

**ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ**

**ಶತಮಾನೋತ್ಸವ**

**ದಿನಾಂಕ 02-02-2009, 03-02-2009 ಮತ್ತು 04-02-2009**

ಯುಗದ ಭಾಗ್ಯ, ಜಗದ ಪುಣ್ಯ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಸ್ವಾಮಿ ಕುಲಕಲಶ, ನಡೆದಾಡುವ ದೇವರು, ಬಸವಾದಿ ಪ್ರತಿರೂಪ, ಸಾಧು, ಸಂತರ, ಯತಿವರೇಣ್ಯರ, ದಾರ್ಶನಿಕರ ಕಣ್ಮಣಿ, ಕಾಯಕ ದಾಸೋಹಗಳ ಸತ್ಯಾರಾಧಕ, ಅವಿರಳ ರಾಷ್ಟ್ರಚಿಂತಕ, ಮಾನವೀಯತೆಯ ಮಂಗಳದೀಪಕರಾಗಿ, ನೂರು ವಸಂತಗಳನ್ನು ತುಂಬಿ ನೂರಾ ಒಂದು ವರ್ಷದಲ್ಲಿ ಮುನ್ನಡೆದಿರುವ ಶುಭಸಂದರ್ಭದಲ್ಲಿ ಭಕ್ತಕೋಟಿ ಶತಮಾನೋತ್ಸವ-ಗುರುವಂದನಾ ಸಮಾರಂಭವನ್ನು ಆಯೋಜಿಸಿದೆ.

ಘನತೆವೆತ್ತ ರಾಷ್ಟ್ರಪತಿಗಳು, ಪ್ರಧಾನಮಂತ್ರಿಗಳು, ಮುಖ್ಯಮಂತ್ರಿಗಳು, ಸಚಿವರು, ಶಾಸಕರು, ಗುರುಪೂಜ್ಯಮಠಾಧಿಪತಿಗಳು, ಪ್ರಸಿದ್ಧ ಸಾಹಿತಿಗಳು, ಕಲಾವಿದರು, ಅಧಿಕಾರಿಗಳು, ಗಣ್ಯಮಾನ್ಯರು, ರೈತಬಾಂಧವರು ವಿವಿಧ ಸಮಾವೇಶಗಳಲ್ಲಿ ಭಾಗವಹಿಸುತ್ತಿದ್ದಾರೆ.

ಇದೊಂದು ಅತ್ಯಪೂರ್ವ ಸಮಾರಂಭ. ಗುರುಸೇವೆಗೆ ಒದಗಿ ಬಂದಿರುವ ಪುಣ್ಯ ವಿಶೇಷ.

**ತಾವೆಲ್ಲ ಬನ್ನಿ, ಶತಮಾನೋತ್ಸವದ ಯಶಸ್ಸಿಗೆ ಸಹಕರಿಸಿ.**

ಎಲ್ಲರಿಗೆ ಪ್ರೀತಿಪೂರ್ವಕ ಸುಸ್ವಾಗತ

# ಸಂಕ್ರಾಂತಿಯ ಸ್ಮರಿಸೋಣ

– ಶ್ರೀಮತಿ ಶಕುಂತಲ ಸಂಗನಾಳಮಠ, 'ಜ್ಯೋತಿರ್ಲಿಂಗ' ೧ನೇ ತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ.

**ಬಂದಿತು ಸಂಕ್ರಾಂತಿ ! ತಂದಿತು ಸುಖಶಾಂತಿ !**

ಎನ್ನುವ ಕವಿವಾಣಿಯಂತೆ ಜನರೆಲ್ಲ ಉಲ್ಲಾಸ, ಉತ್ಸಾಹ ಚೈತನ್ಯ ಸಂತೋಷ ಎಲ್ಲವನ್ನು ಉಂಟು ಮಾಡುತ್ತವೆ. ಮಕರ ಸಂಕ್ರಾಂತಿ ಅಥವಾ ಸಂಕ್ರಮಣ ವಿಶ್ವಾತ್ಮ ಜಗದ ಕಣ್ಣು ಸೂರ್ಯನ ಪಥ ಬದಲಾವಣೆಗೆ ಸಂಬಂಧಿಸಿದ ಹಬ್ಬ. ದಕ್ಷಿಣಾಯನದಿಂದ ಉತ್ತರಾಯಣಕ್ಕೆ ಚಲಿಸುವ ದಿನ. ಈ ಪರ್ವ. ಇದನ್ನು ಉತ್ತರಾಯಣದ ಪುಣ್ಯಕಾಲ ಎನ್ನುವುದುಂಟು. ಪ್ರತಿವರ್ಷ ಸಾಮಾನ್ಯವಾಗಿ ಜನವರಿ 14 ಅಥವಾ 15ರಂದು ಬರುವ ಸಂಕ್ರಾಂತಿ ಋತುವಿನಲ್ಲಿ ಬದಲಾವಣೆ ಹೊಂದುವ ಪರ್ವ ಕಾಲ. ಸಂಕ್ರಾಂತಿ ಎಂದರೆ ಉಜ್ವಲ ಪ್ರಕಾಶ.

ಭಾರತದಲ್ಲಿ ಸೂರ್ಯನು ಪ್ರತ್ಯಕ್ಷ ದೇವರು. ಚರಾಚರ ವಸ್ತುಗಳ ಆತ್ಮ. ಸೂರ್ಯನಿಂದಲೇ ಸಕಲ ಜೀವಗಳ ಉತ್ಪತ್ತಿ, ಪಾಲನೆ ಪೋಷಣೆ ಆಗುವುದು. ಸೂರ್ಯನನ್ನು ಋಗ್ವೇದದಲ್ಲಿ 'ನಭದ ಸ್ವರ್ಣಾಭರಣ' ಎನ್ನುತ್ತಾರೆ. ಸೂರ್ಯೋಪಾಸನೆಗೆ ಹೆಚ್ಚಿನ ಪ್ರಾಶಸ್ತ್ಯವಿದೆ. ರೋಗ ನಿವಾರಣೆಗೆ ಅಭೀಪ್ಸೆಗಳ ಸಿದ್ಧಿಗೆ, ಶಕ್ತಿ ಪ್ರಾಪ್ತಿಗೆ ಆರೋಗ್ಯ ಸುಧಾರಣೆಗೆ ಸೂರ್ಯ ನಮಸ್ಕಾರ ಮಾಡುತ್ತಾರೆ. ವೈಜ್ಞಾನಿಕ ಸಂಶೋಧನೆಯಿಂದ ಸೌರಶಕ್ತಿಯನ್ನು ಬಳಸಿ ವಿದ್ಯುತ್ತನ್ನು ಪಡೆದು ಗೃಹೋಪಯೋಗಿ ಹೊಂದುತ್ತಾರೆ. ಮಳೆ-ಬೆಳೆ, ಕತ್ತಲು-ಬೆಳಕು, ರೋಗ-ರುಜಿನ ಪ್ರಕೃತಿಯ ಚೆಲ್ಲಾಟ-ಪಲ್ಲಟಗಳಿಗೆ ಸೂರ್ಯನೇ ಕಾರಣ.

ಸೂರ್ಯನು ಮಕರರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರು ತಿಂಗಳ ಪ್ರಯಾಣ ಬೆಳೆಸುವ ದಿನ ಮಕರ ಸಂಕ್ರಾಂತಿ. ಶರಶಯ್ಯೆಯಲ್ಲಿ ಮಲಗಿದ ಭೀಷ್ಮರು ಪ್ರಾಣ ತ್ಯಜಿಸಲು ಉತ್ತರಾಯಣ ಪುಣ್ಯದ ಕಾಲವನ್ನು ಕಾಯುತ್ತಿದ್ದರು. ಅದಕ್ಕೆ ಇಂದು ಉತ್ತರಾಯಣದ ಪುಣ್ಯಕಾಲ. ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಸೂರ್ಯನ ಪಥ ಸಾಗುತ್ತಲಿರುತ್ತದೆ ಹಾಗೂ ಹನ್ನೆರಡು ರಾಶಿಗಳಿರುವುದರಿಂದ ಹನ್ನೆರಡು ಸಂಕ್ರಮಣಗಳುಂಟು. ಅದರಲ್ಲಿ ಜನವರಿ 14ರ ಮಕರ ಸಂಕ್ರಮಣ ಜುಲೈ 16ರ ಕರ್ಕಾಟಕ ಸಂಕ್ರಮಣ ಮುಖ್ಯ. ಸಂಕ್ರಾಂತಿ ನಂತರ ಉತ್ತರಾಯಣದಲ್ಲಿ ರಾತ್ರಿ ಕಡಿಮೆ ಆಗಿ ಹಗಲು ಹೆಚ್ಚಾಗುತ್ತದೆ. ಹಾಗೆ ನಮ್ಮ ಜೀವನದಲ್ಲಿ ಸುಖ ಹೆಚ್ಚಾಗುತ್ತದೆ. ಪುರಾಣದ ಪ್ರಕಾರ ಈ ದಿನದಿಂದ ದೇವತೆಗಳುಗೆ ಹಗಲು ರಾಕ್ಷಸರಿಗೆ ರಾತ್ರಿ ಆರಂಭ ಎಂದು ಹೇಳಲಾಗುತ್ತದೆ.

ಡಿಸೆಂಬರ್ ಜನವರಿ ತಿಂಗಳ ಹೇಮಂತ ಶಿಶಿರ ಋತುಗಳ ಚಳಿಗಾಲ. ಚಳಿಗಾಳಿಯ ಕೊರೆತದಿಂದ ಬರಡಾದ ಜೀವಕ್ಕೆ ಕೊರಡಾದ ಗಿಡಬಳ್ಳಿಗಳಿಗೆ ನವಚೇತನ ತುಂಬುತ್ತದೆ. ಉತ್ತರಾಯಣದ ಹಿತಕರವಾದ ವಾತಾವರಣ ಪ್ರಕೃತಿಯ ವಿಲಾಸ-ವಿಕಾಸ, ಸುಗ್ಗಿಯ ಹಿಗ್ಗು, ಆರೋಗ್ಯದ ಭಾಗ್ಯ, ದವಸ-ಧಾನ್ಯಗಳ ತುಂಬಿಕೆಯಿಂದ ಈ ಕಾಲ ಸಮೃದ್ಧಿಯ ಕಣಜ.

**ಹಬ್ಬದ ಆಚರಣೆ :** ಗ್ರಾಮೀಣ ಪ್ರದೇಶದ ಜನರಿಗೆ ಸಂಕ್ರಾಂತಿ ಸಡಗರದ ಹಬ್ಬ. ಹೊಲದಲ್ಲಿ ಬೆಳೆಗಳ ಕಟಾವು ಮುಗಿದು ಮನೆಯ ಕಣಜ ಧಾನ್ಯ ಲಕ್ಷ್ಮಿಯಿಂದ ತುಂಬಿರುತ್ತದೆ. ಮೈ ಮನಸ್ಸು ಸುಖಶಾಂತಿಯಿಂದ ನೆಮ್ಮದಿಯಾಗಿರುತ್ತದೆ. ಹೊಲದ ದುಡಿಮೆಯಲ್ಲಿ ಸಂಗಾತಿಯಾಗಿ ದುಡಿದ ಎತ್ತುಗಳಿಗೆ ಸ್ನಾನ ಮಾಡಿಸಿ, ಹೂ-ಬಣ್ಣಗಳಿಂದ ಅಲಂಕರಿಸಿ ಮೆರವಣಿಗೆ ಮಾಡಿ, ಅಕ್ಕಿ-ಬೆಲ್ಲದ ಹುಗ್ಗಿ ಮಾಡಿ ಆರಾಧ್ಯ ದೈವಕ್ಕೆ ಎಡೆ ಮಾಡುವರು. ರೈತರು ಇದನ್ನು 'ಸುಗ್ಗಿಹಬ್ಬ' ಎನ್ನುವರು. ಉತ್ತರ ಕರ್ನಾಟಕದಲ್ಲಿ 'ಕರಿ ಹಾಯುವುದು' ಎನ್ನುತ್ತಾರೆ.

**ಆರೋಗ್ಯ ದೃಷ್ಟಿ:** ಈ ಸಮಯದಲ್ಲಿ ಸಾಧಾರಣವಾಗಿ ಬರುವ ನಗಡಿ ಕೆಮ್ಮು ಜ್ವರ ಅಸ್ತಮಾ ಇವುಗಳನ್ನು ಉಪಶಮನ ಮಾಡಲು ಒಂದೆರಡು ಕಾಳು ಮೆಣಸು, ಅರಿಶಿನಪುಡಿ, ಬೆಲ್ಲವನ್ನು ಮೂರು ಲೋಟ ನೀರಿಗೆ ಹಾಕಿ ಕುದಿಸಿ, ಬೆರೆಸಿ ಕುಡಿಯಬೇಕು ಎಂದು ಆಯುರ್ವೇದ ಪದ್ಧತಿ ಹೇಳುತ್ತದೆ.

ಉತ್ತರ ಕರ್ನಾಟಕದಲ್ಲಿ 'ಕುಸುರೆಳ್ಳು' ಎಂದು ಕೊಡುತ್ತಾರೆ. ದಕ್ಷಿಣ ಭಾಗದಲ್ಲಿ ಎಳ್ಳು-ಬೆಲ್ಲ ಎಂದು ಹುರಿಗಡಲೆ, ನೆಲಗಡಲೆ, ಕೊಬ್ಬರಿ, ಎಳ್ಳು ಮತ್ತು ಬೆಲ್ಲ ಎಂಬ ಪಂಚದ್ರವ್ಯಗಳ ಮಿಶ್ರಣ ಮಾಡಿ ಕೊಡುತ್ತಾರೆ.





ಕೆಲವು ಕಡೆ ಹುರಿಗಡಲೆ, ನೆಲಗಡಲೆ, ಕೊಬ್ಬರಿ, ಎಳ್ಳು, ಕಬ್ಬಿನ ತುಂಡು, ಸಕ್ಕರೆ ಅಚ್ಚು, ಕೂಡಿಸಿ ಕೊಡುತ್ತಾರೆ. ಕೆಲವು ಕಡೆ ಬಾಳೆಹಣ್ಣನ್ನು ಕೊಡುತ್ತಾರೆ. ಎಳ್ಳು-ಬೆಲ್ಲ ಹಂಚುವುದನ್ನು ಎಳ್ಳು ಬೀರುವುದು ಎನ್ನುತ್ತಾರೆ. ಎಳ್ಳು ಕಡಲೆ ಬೀಜದಲ್ಲಿ ಕ್ಯಾಲ್ಸಿಯಂ ಮತ್ತು ಬೆಲ್ಲದಲ್ಲಿ ಕಬ್ಬಿಣಾಂಶ ಇರುವುದರಿಂದ ನಮಗೆ ಅಗತ್ಯವಾದ ಪೋಷಕಾಂಶಗಳು ದೊರಕುತ್ತವೆ. ಎಳ್ಳುಬೆಲ್ಲ ಶೀತ-ವಾತಕ್ಕೆ ಪರಿಹಾರ ಒದಗಿಸುತ್ತವೆ.

**ಸಂಪ್ರದಾಯ :** ಸಂಕ್ರಾಂತಿ ದಿನದಂದು ಎಳ್ಳು ನೀಡಿ 'ಎಳ್ಳು-ಬೆಲ್ಲ ತಿಂದು ಒಳ್ಳೊಳ್ಳೆ ಮಾತನಾಡೋಣ' 'ಎಳ್ಳು ಬೆಲ್ಲದ ಹಾಗೆ ಇರೋಣ' ಎಂದು ಪರಸ್ಪರ ಅಭಿನಂದಿಸುವರು. ಇದು ಸ್ನೇಹ ಸಂವರ್ಧನ ದ್ಯೋತಕ. ಹಿಂದಿನ ತಪ್ಪುಗಳನ್ನು ತಿದ್ದಿಕೊಂಡು ಮುಂದೆ ನಡೆದುಕೊಳ್ಳುವುದು ಎಂದರ್ಥ. ಹೆಣ್ಣುಮಕ್ಕಳು ಚಿಕ್ಕಮಕ್ಕಳು ಹೊಸ ಬಟ್ಟೆ ತೊಟ್ಟು ಆಭರಣಗಳನ್ನು ಧರಿಸಿ ಶೃಂಗಾರವಾಗಿ ನೆರೆಹೊರೆಯವರಿಗೆ ಬಂಧುಗಳಿಗೆ ಎಳ್ಳು ಬೀರಲು ಹೋಗುವುದೇ ಸಂಭ್ರಮ. ಹಿರಿಯರಿಂದ ಆಶೀರ್ವಾದ ಹೊಂದುತ್ತಾರೆ.

**ಇತರ ರಾಜ್ಯಗಳಲ್ಲಿ :** ಆಂಧ್ರದಲ್ಲಿ 'ಓಣಂ' ತಮಿಳುನಾಡಿನಲ್ಲಿ 'ಪೊಂಗಲ್' ಎಂದು ಕರೆಯುವ ಸಂಕ್ರಾಂತಿ ವಿಶಿಷ್ಟ ಹಬ್ಬ. ಪೊಂಗಲ್ ಎಂದರೆ ಹುಗ್ಗಿ, ಹೆಸರುಬೇಳೆ ಬೆಲ್ಲ ತುಪ್ಪಗಳಿಂದ ಕೂಡಿದ ಹುಗ್ಗಿ ಜೀರ್ಣಕಾರಿ. ತಮಿಳುನಾಡಿನಲ್ಲಿ ನೆಲ್ಲಿನಿಂದ ಅಕ್ಕಿಯನ್ನು ತೆಗೆದು ಬೇಯಿಸಿ ಕಬ್ಬಿನ ಜಲ್ಲೆಗಳನ್ನಿರಿಸಿ ಪೂಜೆ ಮಾಡುತ್ತಾರೆ. ಹೊಸ ಅಕ್ಕಿಯ ಪೊಂಗಲ್ ಮಾಡಿ ದೇವರಿಗೆ ನೈವೇದ್ಯ ಸಮರ್ಪಿಸುತ್ತಾರೆ. 'ಪೊಂಗಲ್' ಎಂದರೆ ಉಕ್ಕುವುದು ಎಂದರ್ಥ. ಆಂಧ್ರದಲ್ಲಿ ಈ ದಿನ ವಿಶೇಷ ಪೂಜೆ ಶ್ರೀರಾಮನಿಗೆ ಈ ದಿನ ರಾಮ ರಾವಣನನ್ನು ಕೊಂದು ಸೀತೆಯನ್ನು ಮರಳಿ ಪಡೆದ ದಿನ ಎಂದು ಭಾವಿಸುತ್ತಾರೆ.

ವಿವಿಧ ದೇಶಗಳಲ್ಲಿ – ಗ್ರೀಕ್ ದೇಶದಲ್ಲಿ – ಗ್ರೀಕರ ದೃಷ್ಟಿಯಲ್ಲಿ ಮಕರ ರಾಶಿ ಎಂದರೆ ಮೇಲಿನ ಶರೀರ ಮೇಕೆಯ ಆಕೃತಿ, ಕೆಳಗಿನ ಭಾಗ ಮೀನಿನ ಆಕೃತಿಯ ಜಂತು. ಇದು ಬೇಕನ್ ಎನ್ನುವ ನದಿ ದೇವತೆ ಎಂಬ ನಂಬಿಕೆ. ಒಂದು ಸಲ ನದಿ ದೇವತೆ ವಿಹರಿಸುತ್ತಿದ್ದಾಗ ಸೈಫನ್ ಎನ್ನುವ ರಾಕ್ಷಸ ಹಿಂಬಾಲಿಸಿದಾಗ, ತಪ್ಪಿಸಿಕೊಳ್ಳಲು ಬೇಕನ್ ಈ ಜಂತು ಆದಳು. ಈ ವಿಚಿತ್ರ ರೂಪವೇ ಮಕರ ರಾಶಿ. ಸೂರ್ಯನು ಈ ಸಂಕ್ರಮಣ ಕಾಲದಲ್ಲಿ ಗ್ರೀಕರು ಜಲ ಸಮೃದ್ಧಿ, ಫಲಾಭಿವೃದ್ಧಿಗೆ ಬೇಕನ್ ಸ್ಮರಣಾರ್ಥ ಮಕರ ಸಂಕ್ರಮಣವನ್ನು 'ಬೇಕನ್' ಎಂದು ಆಚರಿಸುವರು. ರೋಮನ್‌ನಲ್ಲಿ 'ಬ್ಯಾತಸ್‌ಡೇ' ಎಂದು ಆಚರಿಸುವರು. ಬ್ಯಾತಸ್ ಎಂದರೆ ಕಾಮ, ಮನ್ಮಥ. ವಿವಾಹಿತ ಸ್ತ್ರೀ ಸಂತಾನ ಪ್ರಾಪ್ತಿಗಾಗಿ, ಅವಿವಾಹಿತ ಸ್ತ್ರೀ ಉತ್ತಮವಾದ ವರನಿಗೆ ಈ ಹಬ್ಬ ಆಚರಿಸುವರು. ಪರಸ್ಪರ ಸಿಹಿ ವಿನಿಮಯ ಈ ದಿನದ ವೈಶಿಷ್ಟ್ಯ.

ಸ್ವೀಡನ್‌ನಲ್ಲಿ ಜನವರಿ ತಿಂಗಳ ಮಧ್ಯಭಾಗದಲ್ಲಿ ಗತಿಸಿದ ಹಿರಿಯರ ಜ್ಞಾಪಕಾರ್ಥ ಈ ಹಬ್ಬ ಆಚರಿಸುವರು. ಬೆಂಕಿ ಹಾಕಿ ಬೆಂಕಿ ಸುತ್ತ ಸುತ್ತುತ್ತಾ ಗತಿಸಿದ ಹಿರಿಯರಿಗೆ ಆತ್ಮಶಾಂತಿ ಕೋರುತ್ತ ಉರಿಯುತ್ತಿರುವ ದೀವಟಿಗೆಗಳನ್ನು ಆಕಾಶದ ಕಡೆಗೆ ತೋರಿಸುತ್ತಾರೆ. ಇದು ಸಂಕ್ರಾಂತಿ ಸಮಯದಲ್ಲಿಯ ಪಿತೃತರ್ಪಣವನ್ನು ಹೋಲುತ್ತದೆ.

ಈಜಿಪ್ಟ್‌ನಲ್ಲಿ 'ನಮ್ ಫೆಸ್ಟಿಮ್' ಎಂದು ಆಚರಿಸುವರು. ಈಜಿಪ್ಟಿ ದೇವತೆ ನಮ್ ಮಕರರಾಶಿಯ ಪ್ರತಿಬಿಂಬ. ಸೂರ್ಯ ಮಕರರಾಶಿಯನ್ನು ಸೇರುವ ಸಂದರ್ಭದಲ್ಲಿ ನೈಲ್ ನದಿ ತುಂಬಿ ಹರಿಯುತ್ತದೆ. ನದಿತೀರದಲ್ಲಿ ಫಲಪುಷ್ಪಗಳನ್ನು ವಿಸರ್ಜಿಸಿ, ಪೂಜಿಸಿ ಒಟ್ಟಾಗಿ ಎಲ್ಲರೂ ಊಟಮಾಡಿ ಹಬ್ಬವನ್ನು ಆಚರಿಸುವರು. ಈ ಆಚರಣೆಗಳೆಲ್ಲ ಕೆಲವು ರೀತಿಯಲ್ಲಿ ನಮ್ಮ ಸಂಕ್ರಾಂತಿ ಹಬ್ಬದ ಆಚರಣೆಗಳನ್ನು ಹೋಲುತ್ತವೆ.

ನಮ್ಮಲ್ಲಿ ಸಂಕ್ರಾಂತಿ ದಿನದಂದು ನದಿ ಪುಣ್ಯಸ್ನಾನ, ಒಟ್ಟಾಗಿ ಕೂಡಿ ಊಟ ಮಾಡುವರು. ಎಳ್ಳು, ಬೆಲ್ಲ ವಿನಿಮಯ ಮಾಡಿಕೊಳ್ಳುವರು. ಬಹಳ ಮುಖ್ಯ ನಗರಗಳಲ್ಲಿ ಸಂಕ್ರಾಂತಿಯ ಆಚರಣೆ ಆಚರಣೆ ಕಡಿಮೆ ಆಗುತ್ತಲಿವೆ ಸಂಕ್ರಾಂತಿಯ ಸ್ವಾರಸ್ಯವನ್ನು ಗ್ರಾಮೀಣ ಪ್ರದೇಶದಲ್ಲಿ ರೈತರ ಮನೆಗಳಲ್ಲಿ ವಿಶೇಷವಾಗಿ ಕಾಣಬಹುದು. ಹೆಚ್ಚು ಆಡಂಬರ ವೆಚ್ಚವಿಲ್ಲದ ಹಬ್ಬ, ಹಬ್ಬದ ನೆಪದಿಂದ ಆರೋಗ್ಯ ಸುಧಾರಣೆಯ ಅರ್ಥವೂ ಇವರಲ್ಲಿ ಅಡಗಿದೆ. ಮನಸ್ಸಿನ ಕಹಿ ಭಾವನೆ ಮರೆತು ಸಿಹಿ ಭಾವನೆಗಳನ್ನು ತುಂಬಿಸಿಕೊಳ್ಳುವುದು ಸಂಕೇತ ಸಂಕ್ರಾಂತಿ. ಮುಂದಿನ ತಲೆಮಾರಿನವರಿಗೆ ಇಂಥ ಹಬ್ಬಗಳು ಕೇವಲ ಕಥೆ ಆಗುವುದೇನೋ ಎಂಬ ಪ್ರಶ್ನೆ ಕಾಡುತ್ತಲಿದೆ.

*

## ಸಿದ್ಧಪುರುಷ ಶ್ರೀ ಅಟವೀಸ್ವಾಮಿಗಳು

–ಸಂಗ್ರಹ : ಶ್ರೀ ಹೆಚ್.ಕೆ. ಮಹದೇವಯ್ಯ, ಶಿಕ್ಷಕರು, ಹಬ್ಬತ್ತನಹಳ್ಳಿ.



ಹಾನಗಲ್ಲು ತಾಲ್ಲೂಕು ಕೂಡಲ ಒಂದು ಸಂಗಮ ಕ್ಷೇತ್ರ, ಇದೊಂದು ಪುರಾತನ ಪುಣ್ಯಕ್ಷೇತ್ರ, ಈ ಕೂಡಲದಲ್ಲಿ ಸಂಗಮೇಶ್ವರ ಶಿವಲಿಂಗವಿದೆ. ಬಸವಣ್ಣನವರ ಕುಮಾರನಾದ ಮುದ್ದುಸಂಗಯ್ಯನವರ ಗುಡಿಯಿದೆ. ಪಕ್ಕ ದಲ್ಲಿಯೇ ದೊಡ್ಡ ವಿರಕ್ತಮಠವಿದೆ. ಅ ಮಠದಲ್ಲಿ ನೀಲಮ್ಮ ನವರ ಗುಡಿ ಎಂಬ ಪ್ರತ್ಯೇಕ ಭಾಗವಿದೆ. ಈ ಮಠದ ಆವರಣದಲ್ಲಿಯೇ ಮಹಾಮಹಿಮಶಾಲಿಗಳಾದ ಗುರು ನಂಜೇಶ್ವರ (ಗುರುನಂಜಪ್ಪ) ಗದ್ದುಗೆಯಿದೆ. ಇವರು ಮಹಾ ಮಹಿಮಶಾಲಿಗಳು ಇಂತಹ ಮಹಿಮಾಶಾಲಿಗಳಾದ ಗುರು ನಂಜೇಶ್ವರರ ಗದ್ದುಗೆಯಲ್ಲಿ ಪೂಜಾನುಷ್ಠಾನಗಳನ್ನು ಮಾಡಿ ಕೊಂಡಿದ್ದವರೇ ಮಹಿಮಾಶಾಲಿಗಳಾದ ಅಟವೀಶ್ವರರು.

ಹೀಗೆ ಪೂಜೆ ಮಾಡಿಕೊಂಡಿರಲು, ಕೂಡಲದ ಮಾವಿನ ಮರದವರೆಂಬ ಅಡ್ಡ ಹೆಸರಿನ ಗಣ್ಯ ಮನೆತನದ ಓರ್ವರು, ಅಟವೀಶ್ವರರ ಮೇಲೆ ಕೈ ಮಾಡಿದ ಪ್ರಸಂಗ ಜರುಗಿತೆಂದು ಹೇಳಲಾಗಿದೆ. ಇದರಿಂದ ನೊಂದ ಅಟವೀಶ್ವರರು ರಾತ್ರಿಯೇ ನಾಗನೂರಿಗೆ ಬರುವಷ್ಟರಲ್ಲಿ ಅಲ್ಲಿನ ಜನ ಸಂತೈಸಿ ಪೂಜೆಗೆ ಕರೆದೊಯ್ದರು. ಪೂಜೆ ಮಾಡಿ ಮಲಗಿದ ಗುರುಗಳು ರಾತ್ರಿ ಯಾರಿಗೂ ಹೇಳದೆ, ತಮ್ಮ ಪೂಜಾ ಸಾಮಾಗ್ರಿಗಳನ್ನು ಅಲ್ಲಿಯೇ ಬಿಟ್ಟು, ಹೊರಟುಬಿಟ್ಟರು. ಎಲ್ಲಿಗೆ ಹೋದರೆಂದು ಯಾರಿಗೂ ತಿಳಿಯಲೇ ಇಲ್ಲ. ಸ್ವಾಮಿಗಳು ಹೊರಟು ಊರೂರು ದಾಟಿ ಗುಬ್ಬಿಗೆ ಬಂದು ತಲುಪಿದರು. ಅಲ್ಲಿಯೇ ತಂಗಿದರು.

ಅತ್ತ ಕೂಡಲದ ಅನೇಕ ಜನಗಳು ಸ್ವಾಮಿಗಳನ್ನು ಹುಡುಕಿ, ಹುಡುಕಿ, ಸಿಕ್ಕದೆ ನಿರಾಸೆಗೊಂಡರು. ಇಂದಿಗೂ ಆ ಭಾಗದಲ್ಲಿ ಏನಾಗಿದ್ದಾರವ್ವ ಕಂಡೀರೇನಡವೀ ಸ್ವಾಮೀನ ಎಂಬ ಹಾಡುಗಳು ಪ್ರಚಲಿತವಾಗಿವೆ. ಒಂದೇ ಮನೆಯ ಮೂವರಿಗೆ ಅಡಿವೆಪ್ಪ, ಅಡಿವೆವ್ವ ಎಂಬ ಹೆಸರಿಡುವ ಪದ್ಧತಿ ಈಗಲೂ ಇದೆಯೆಂತೆ. ಅವೆಲ್ಲವೂ ಅಟವೀ ಸ್ವಾಮಿಗಳದ್ದೇ ಪ್ರಭಾವ.

ವಿಷರೋಗ ನಿವಾರಕಳೂ, ಇಷ್ಟಸಿದ್ಧಿದಾಯಿಕಿಯೂ ಎನಿಸಿ, ಗೋಸಲ ಸಿದ್ಧೇಶ್ವರರ ಕಾಲದಿಂದಲೂ ಜನತೆಯಲ್ಲಿ ಶ್ರದ್ಧಾಭಕ್ತಿಗಳನ್ನು ಮೂಡಿಸಿದ್ದ ಸಿದ್ಧಗಂಗಾ ಮಾತೆಯ ಪೂಜೆಗೆ (ಗಂಗಾಪೂಜೆ) ನಿಟ್ಟೂರು, ಗುಬ್ಬಿಯ ಕಡೆಯಿಂದ ಜನ ಗಾಡಿಗಳನ್ನು ಹೂಡಿಕೊಂಡು ಮಂಗಳವಾರ, ಶುಕ್ರವಾರ, ಬಂದು ಹೋಗುವ ವಾಡಿಕೆ (ಈಗಲೂ ಅದೇ ಪರಿಪಾಠವಿದೆ). ಗುಬ್ಬಿಯಲ್ಲಿ ಬೀಡುಬಿಟ್ಟಿದ್ದ ಅಡವೀಶ್ವರರಿಗೆ ಸಿದ್ಧಗಂಗೆಯ ವಿಷಯ ತಿಳಿದು, ಬರುವ ಜನರೊಡನೆ ಗಾಡಿಯಲ್ಲಿ ಕುಳಿತು ಬಂದರು. ಇಲ್ಲಿನ ಪ್ರಾಕೃತಿಕ ಸನ್ನಿವೇಶ, ತಪೋನುಷ್ಠಾನ ಯೋಗ್ಯ ಸ್ಥಳ, ಕ್ಷೇತ್ರ ಮಹಾತ್ಮೆಗಳು ಅವರ ಮನಸ್ಸನ್ನು ಸೂರೆಗೊಂಡವು. ಅಂದಿನ ಕ್ಷೇತ್ರಾಧಿಪತಿ ಗಳಾಗಿದ್ದ ಶ್ರೀ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಪಾಡಿಗೆ ತಾವು ಪೂಜಾನುಷ್ಠಾನದಲ್ಲಿದ್ದರು. ದಾಸೋಹ ಸದ್ಭಾವಿ ಗಳಾದ, ಪ್ರತ್ಯುತ್ಪನ್ನಮತಿಗಳಾದ ಅಡವೀಶ್ವರರ ಲೋಕೋ ಪಕಾರಕ ಸೇವೆಗೆ ಇಂತಹ ಸ್ಥಳದ ಅವಶ್ಯಕತೆ ಇತ್ತು. ಇಲ್ಲಿಯೇ ಗುಹೆಯಲ್ಲಿ ಉಳಿದು ತಪೋನಿರತರಾದರು. ಅವರ ತಪಸ್ಸಿಗೆ ಸಿದ್ಧಗಂಗಾ ಮತೆಯ ಕಾರುಣ್ಯ ಲಭ್ಯ ವಾಯಿತು. ಸಿದ್ಧಪುರುಷರೇ ಆದರು, ಹೀಗೆ ಸಿದ್ಧಗಂಗೆಯಲ್ಲಿ ನೆಲೆಸಿ, ಸಂಸ್ಕೃತ ಶಿಕ್ಷಣ, ದಾಸೋಹಗಳನ್ನು ಸ್ಥಾಪಿಸುವಲ್ಲಿ ಮೂಲಪುರುಷರಾದರು. ಅವರು ಹಚ್ಚಿದ ಒಲೆ ಇಂದಿಗೂ ಆರಿಲ್ಲ ಎಂಬುದು ಜಗಜ್ಜಾಹೀರವಷ್ಟೆ. ಹೀಗೆ ಸಿದ್ಧಗಂಗಾ ಕ್ಷೇತ್ರದಲ್ಲಿ ಅನುಷ್ಠಾನ ಕೈಗೊಂಡು, ಅನೇಕ ರಚನಾತ್ಮಕ ಕಾರ್ಯಗಳನ್ನು ಮಾಡಿ, ಸಿದ್ಧಗಂಗೆಯ ಕೀರ್ತಿಯನ್ನು ಬೆಳಗಿಸಿದ ಮಹಾಯೋಗಿಗಳು.

*





## ಶ್ರೀ ಉದ್ದಾನಶಿವಯೋಗಿಗಳು

–ಡಾ॥ ಜಿ. ಮರುಳಸಿದ್ಧಯ್ಯ



ಶ್ರೀ ಶಿವಯೋಗಿಗಳ ವ್ಯಕ್ತಿತ್ವದಲ್ಲಿ ಬಹುಪಾಲು ಅಜ್ಞಾತ ವಾದುದು. ಅವರು ಹುಟ್ಟಿ ಬೆಳೆದು ಶ್ರೀ ಸಿದ್ಧಗಂಗಾ ಕ್ಷೇತ್ರಾ ಧ್ಯಕ್ಷರಾದುದು ಧರ್ಮಕರ್ಮ ಸಂಯೋಗವೆಂದು ಕೆಲವರ ಭಾವನೆ. ಕೆಲವರು ಶ್ರೀಗಳನ್ನು ದೂರದಿಂದಲೂ ಕಾಣುತ್ತಾರೆ. ಇನ್ನು ಕೆಲವರು ಇವರ ಜೀವನವನ್ನು ವಿಮರ್ಶಿಸಿ ದೂರಾ ಲೋಚನೆ ಮಾಡಿಯೂ ನಿರ್ಧರಿಸುವರು. ನಾನು ಶ್ರೀ ಕ್ಷೇತ್ರದಲ್ಲೇ ವಿದ್ಯಾಭ್ಯಾಸ ಮಾಡಿ ಶ್ರೀಗಳವರ ಸಾನ್ನಿಧ್ಯದಲ್ಲಿದ್ದು ಕೊಂಡು ಅವರನ್ನು ಸಾಕ್ಷಾತ್‌ದರ್ಶನ ಮಾಡಿಕೊಂಡವನು. ಆದ್ದರಿಂದ ಅವರ ಪೂರ್ವಾಶ್ರಮ ಹಾಗೂ ಪುನರ್‌ಜನ್ಮದ ಬಗ್ಗೆ ಇರುವ ಅನೇಕ ಕತೆಗಳನ್ನು ಒರೆಗಲ್ಲಿಗೆ ಹಚ್ಚಿ ಸತ್ಯಾನ್ವೇಷಣೆ ಮಾಡಿದ್ದೇನೆ. ಇಲ್ಲಿನ ಕೆಲವು ವಿಷಯಗಳು ಶ್ರೀಗಳವರ ನಿಕಟವರ್ತಿಗಳಿಂದಲೂ, ಸಹಪಾಠಿಗಳಿಂದಲೂ ತಿಳಿದುಬಂದವು. ಹಲವು ಸ್ವಾನುಭಾವದಿಂದ ತಿಳಿದವು. ಆದ್ದರಿಂದ ಇಲ್ಲಿ ಕಟ್ಟುಕತೆಗಳಿಗೂ, ಸಲ್ಲದ ಉತ್ಪ್ರೇಕ್ಷೆಗಳಿಗೂ ಅವಕಾಶವಿತ್ತಿಲ್ಲ.

ಒಟ್ಟಿನಲ್ಲಿ ಶ್ರೀಗಳ ಜೀವನ ಆಧ್ಯಾತ್ಮಮಯ, ತಪೋ ಮಯ, ಪುರುಷಾಕಾರಮಯ 'ಕಾಯಕವೇ ಕೈಲಾಸ'ವೆಂದು ಶ್ರೀ ಸಿದ್ಧಗಂಗಾ ಕ್ಷೇತ್ರದ ಸರ್ವತೋಮುಖವಾದ ಏಳಿಗೆಗಾಗಿ ಆಧ್ಯಾತ್ಮ, ಶರೀರ ಎರಡನ್ನೂ ಧಾರೆಯೆರೆದ ಜೀವನ್ಮುಕ್ತರು. ವಿದ್ಯಾಭ್ಯಾಸವು ಅಷ್ಟಾಗಿಲ್ಲದಿದ್ದರೂ ಜನ್ಮ ಜನ್ಮಾಂತರದ ತಪೋಮಹಿಮೆಯಿಂದ ಶುದ್ಧಸ್ಫಟಿಕ ಸಂಕಾಶ ವಾದ ಆತ್ಮಶಕ್ತಿಯಿಂದ ಕಷ್ಟನಿಷ್ಠುರಗಳೆಲ್ಲವನ್ನು ಸದೆಬಡಿದು ಆ ಜನ್ಮಸಿದ್ಧ ವೀರವಿರಕ್ತಿ ಹಾಗೂ ಶುದ್ಧ ಸಂನ್ಯಾಸದಿಂದ ಸಿದ್ಧಗಂಗಾ ಕ್ಷೇತ್ರವನ್ನು ಆದರ್ಶದ ಅಡಿಗಲ್ಲಿನ ಮೇಲೆ ಕಟ್ಟಲು ದೈವಪ್ರೇರಿತ ಶಿವಶಿಲ್ಪಿಯಂತೆ ಕ್ಷೇತ್ರದಲ್ಲಿ ನಿಂತರು. ಶ್ರೀಕ್ಷೇತ್ರದಲ್ಲಿ ವಿದ್ಯೆ ಹಾಗೂ ಸಂಸ್ಕೃತಿಗಳ ಸಂಪೂರ್ಣತೆ ಪಡೆದು ಉಳಿದವರಲ್ಲೂ ಅದನ್ನು ರೂಢಿಸಲು ಪ್ರಯತ್ನಿಸಿ ಕ್ಷೇತ್ರದಲ್ಲಿ ನೈತಿಕ ಹಿನ್ನಲೆಯನ್ನು ಬಹುಭದ್ರವಾಗಿ ರೂಪಿಸಲು ಹವಣಿಸಿದರು. ವಿದ್ಯಾದಾನ, ಅನ್ನದಾನಗಳ ನೆಲೆಯ ಮೇಲೆ ಕಾಯಕ ಮಂತ್ರದಿಂದ, ತಪಶ್ಶಕ್ತಿಯಿಂದ ಪುಣ್ಯಕ್ಷೇತ್ರವೆಂದು ಜನಶ್ರುತಿ ಮೊಳಗುವಂತೆ ಮಾಡಿ ಶ್ರೀ ಕ್ಷೇತ್ರಕ್ಕೆ ಸುಭದ್ರ ಅಡಿಪಾಯವನ್ನು ಹಾಕಿದರು. ಇಷ್ಟಾದರೂ ಅಹಂಕಾರ ಇವರನ್ನು ಮುಟ್ಟಲಿಲ್ಲ.

**ಬಾಲ್ಯಜೀವನ :**

ಶ್ರೀಕ್ಷೇತ್ರಕ್ಕೆ ಪೂರ್ವದಲ್ಲಿರುವ ದಾಬಸ್‌ಪೇಟೆ ಹತ್ತಿರ ವಿರುವ ಲಕ್ಕೂರು ಶ್ರೀಗಳ ಜನ್ಮಸ್ಥಳ. ಬಾಲ್ಯದಲ್ಲೇ ಅವರು ಶಿವಪೂಜಾ ದುರಂಧರರಾಗಿದ್ದರು. ಇದನ್ನು ಇಷ್ಟಪಡದ ಅವರ ಮಾತಾಪಿತೃಗಳು ಅವರನ್ನು ಮೇಕೆ ಕಾಯಲು ಕಳುಹಿಸಿದರು. ಏಕಾಂತ ಧ್ಯಾನಕ್ಕೆ ಸದವಕಾಶವನ್ನು ನೀಡುವ ಈ ಕೆಲಸವನ್ನು ಮನಸಾರ ಒಪ್ಪಿದರು. ಸಂತೋಷದಿಂದ ಊರ ಮಗ್ಗುಲಲ್ಲಿರುವ ನಿಜಗಲ್ ದುರ್ಗದಲ್ಲಿ ಮೇಕೆ ಕಾಯುವ ಕಾರ್ಯ ಆರಂಭವಾಯಿತು. ಕ್ರಮೇಣ ಶ್ರೀ ಸಿದ್ಧಗಂಗಾ ಕ್ಷೇತ್ರದ ಹೆಸರು ಇವರ ಕಿವಿಗೆ ಬಿತ್ತು. ಸಂಸಾರದ ಜಂಗುಳಿಯಿಂದ ಮನಸ್ಸು ರೋಸಿಹೋಗಿತ್ತು. ಗ್ರಾಮ ವಾಸವು ಬೇಸರವಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಹೋಗಲು ನಿಶ್ಚಯಿಸಿದರು. ಪೂರ್ವಪುಣ್ಯವಿರಬೇಕು. ನಿಜಗಲ್ ಬೆಟ್ಟದಲ್ಲಿ ಅವರಿಗೆ ಋಷಿ ಸಂಪರ್ಕ ಬೆಳೆದು ಅದರ ಫಲವಾಗಿ ಮಂತ್ರ, ತಂತ್ರ, ಯೋಗಾಭ್ಯಾಸ ಇವುಗಳಲ್ಲಿ ಪೂರ್ಣ ಪರಿಣಿತಿ ಯುಂಟುಮಾಡಿತು. ದೃಢಕಾಯರೂ ಗುರುಸೇವಾನಿಷ್ಠರೂ ಆಗಿದ್ದ ಇವರಿಗೆ ಶ್ರೀಕ್ಷೇತ್ರದಲ್ಲಿ ಶ್ರೀ ಮನ್ನಿರಂಜನ ಅಡವೀ ಸ್ವಾಮಿಗಳ ಆಶೀರ್ವಾದವಾಯಿತು. ಬೆಳಕಿಗೆ ಬರುತ್ತಿದ್ದ ಶ್ರೀ ಕ್ಷೇತ್ರದ ದಾಸೋಹಕ್ಕಾಗಿ ಸೌದೆ ತರುವುದು ಇವರ

ಕೆಲಸವಾಯಿತು. ಇದುವೆ ಅವರ ಪ್ರತಿದಿನದ ಕಾಯಕ. ಅವಕಾಶ ದೊರೆತಾಗ ತಮ್ಮ ಯೋಗಾಭ್ಯಾಸ ಪ್ರಾಣಾಯಾಮಾದಿಗಳನ್ನು ಮಾಡಿಕೊಳ್ಳುತ್ತಿದ್ದರು. ಇವರ ಪೂರ್ವಾಶ್ರಮದ ಹೆಸರು ರುದ್ರಪ್ಪ, ರುದ್ರಪ್ಪನವರು ಹೆಸರಿಗೆ ತಕ್ಕಂತೆ ಉಗ್ರಮೂರ್ತಿ. ಈ ಭಾವ ಪ್ರಾಯಶಃ ಅವರ ಜೀವನದ ಕೊನೆಯ ತನಕವೂ ಇದ್ದಿತು. ಇದರಿಂದಾಗಿ ಅವರ ವ್ಯಕ್ತಿತ್ವದಲ್ಲಿ ಕಳೆಯೇರಿತೇ ವಿನಾ ನ್ಯೂನತೆಯುಂಟಾಗಲಿಲ್ಲ.

**ಆಧ್ಯಾತ್ಮ-ಸಸಿ ಮರವಾಯಿತು :**

ನಿಜಗಲ್ ಬೆಟ್ಟದಲ್ಲಿ ದೊರೆತ ಮುನಿಸಂಪರ್ಕ ಅವರಲ್ಲಿ ರೂಢಮೂಲವಾಗಿತ್ತು. ಕತ್ತಲಲ್ಲಿ ಸೌದೆಗಾಡಿಗಳನ್ನು ತರುವ ಸಂದರ್ಭದಲ್ಲಿ ರುದ್ರಪ್ಪನವರೇ ದಾರಿ ಕಾಣುವುದಿಲ್ಲವೆಂದಾಗ ಗಾಡಿಯ ಇಕ್ಕೆಲಗಳಲ್ಲೂ ಪಂಜುಗಳು ಗಾಡಿಗಳನ್ನು ಮಠದವರೆಗೂ ಸುಖವಾಗಿ ಒಯ್ಯುತ್ತಿದ್ದವು. ಕೆಲಸದವರಿಗೆ ಯಾವುದಾದರೂ ಖಾಯಿಲೆ ಬಂದಾಗ ರುದ್ರಪ್ಪನವರು ಮಂತ್ರಶಕ್ತಿಯಿಂದ ಅವರನ್ನು ಗುಣಪಡಿಸುತ್ತಿದ್ದರು. ಸ್ವಾಮಿಗಳ ಕೃಪೆ ಇನ್ನೂ ಹೆಚ್ಚಾದರೂ ಅವರನ್ನು ಶ್ರೀಗಳು ಕರೆದು 'ಈಗಲೇ ಈ ಮಾಯ ಮಾಟಗಳನ್ನು ಬಿಟ್ಟುಬಿಡು' ಎಂದು ಆಜ್ಞಾಪಿಸಿ ಅವರಿಂದ ನಮಸ್ಕಾರ ಹಾಕಿಸಿಕೊಂಡರಂತೆ.

**ಅದ್ಭುತ ಬ್ರಹ್ಮರಾಕ್ಷಸ ಘಟನೆ :**

ಸಕಲೇಶಪುರದ ತೋಟದ ಗದ್ದೆ ಎಸ್ಟೇಟಿನ ಕಾಫಿ ಪ್ಲಾಂಟರ್ ಶ್ರೀ ದೇವಪ್ಪಗೌಡರಿಗೆ ಬ್ರಹ್ಮಾರಾಕ್ಷಸ ಕಾಟ. ಅವರನ್ನು ಸಿದ್ಧಗಂಗೆಗೆ ಬ್ರಹ್ಮರಾಕ್ಷಸನ ಮೋಕ್ಷಕ್ಕಾಗಿ ಕರೆತಂದರು. ಬ್ರಹ್ಮರಾಕ್ಷಸ ಹಿಡಿದ ದೇವಪ್ಪಗೌಡರನ್ನು ಶ್ರೀ ಅಡವೀಸ್ವಾಮಿಗಳ ಎದುರಿನಲ್ಲಿ ನಿಲ್ಲಿಸಿದಾಗ ಅವರು 'ಇವನಾರು? ಇವನಲ್ಲ ನನ್ನ ಗುರು, ನನ್ನ ಗುರುವೆಲ್ಲಿ? ಎಂದು ಗರ್ಜಿಸಿ ತಿರುಗುಮುರುಗಾಗಿ ನಿಂತರು. ಸೌದೆ ಗಾಡಿಯನ್ನು ಹೊಡೆದುಕೊಂಡು ರುದ್ರಪ್ಪನವರು ಬರುತ್ತಲೇ 'ಗುರುವೇ! ನನ್ನನ್ನು ಕಾಪಾಡಬೇಕು' ಎಂದು ದೇವಪ್ಪಗೌಡರು ರುದ್ರಪ್ಪನವರ ಕಾಲುಗಳನ್ನು ಹಿಡಿದುಕೊಂಡರಂತೆ. ಆಗ ದೇವಪ್ಪಗೌಡರಲ್ಲಿ ಆವಾಹಿತನಾಗಿದ್ದ ಬ್ರಹ್ಮರಾಕ್ಷಸನು ತಮ್ಮಿಬ್ಬರ ಪೂರ್ವಜನ್ಮದ ವೃತ್ತಾಂತವನ್ನು ಹೇಳುವ ಸಂದರ್ಭದಲ್ಲಿ ತಾವೀರ್ವರೂ ಅಲ್ಲಿ ಋಷಿಗಳಾಗಿದ್ದರೆಂದು ಶ್ರೀಗಂಗಾಂಬಿಕೆಯು ದರ್ಶನವಿತ್ತಾಗ ಗೈದ ಒಂದು ಅಪರಾಧಕ್ಕಾಗಿ ತಾನು ಬ್ರಹ್ಮರಾಕ್ಷನ ಪೀಡೆಗೆ ಬಲಿಯಾದುದಾಗಿಯೂ ಅದು ತಮ್ಮಿಂದ ನಿವಾರಣೆಯಾಗಬೇಕೆಂದೂ ನುಡಿದನು. ಆಗಲೇ ಬ್ರಹ್ಮರಾಕ್ಷಸ ಶ್ರೀ ರುದ್ರಪ್ಪನವರನ್ನು ಹೆಗಲಮೇಲೇರಿಸಿಕೊಂಡು ಕ್ಷೇತ್ರದ ಮಗ್ಗುಲಲ್ಲಿರುವ ರಾಮಲಿಂಗದೇವರ ಬೆಟ್ಟದಲ್ಲಿರುವ ಶ್ರೀ ದೊಡ್ಡಸಿದ್ಧಪ್ಪನವರ ಗವಿಗೆ ಹೋಗಿ ಅಲ್ಲಿ ತಾವೀರ್ವರೂ ತಪಸ್ಸು ನಡೆಸಿದ ಸ್ಥಳ ಗುರುತು ಇತ್ಯಾದಿಗಳನ್ನು ತೋರಿಸಿತು. ಇದನ್ನು ಶ್ರೀ ಅಡವೀ ಸ್ವಾಮಿಗಳು ಕಣ್ಣಾರೆ ಕಂಡಿದ್ದುದರಿಂದಲೇ ರುದ್ರಪ್ಪನವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ನೇಮಿಸಲು ನಿರ್ಧರಿಸಿದರು.

**ಮಳೆ ಬಿಟ್ಟರೂ ಮರದ ಹನಿ ಬಿಡಲಿಲ್ಲ :**

ಶ್ರೀ ಕ್ಷೇತ್ರದಲ್ಲಿ ರುದ್ರಪ್ಪನವರು ಪ್ರಭಾವಿಗಳಾದರು. ಇತ್ತ ಶ್ರೀ ಅಡವೀಸ್ವಾಮಿಗಳ ಅವಸಾನಕಾಲವೂ ಪ್ರಾಪ್ತವಾಗಿ ಅವರು ಹಠಾತ್ತನೆ ತೊಟ್ಟಿಲಕೆರೆಯಲ್ಲಿ ಶಿವೈಕ್ಯರಾದರು. ಬರೀ ಮೈಯಲ್ಲೇ ಅವರ ಸಮಾಧಿ ಕಾರ್ಯಗಳನ್ನು ನೆರವೇರಿಸ ಹೋದ ಶ್ರೀ ರುದ್ರಪ್ಪನವರಿಗೆ ತೊಂದರೆ ಕೊಡುವ ಅನೇಕ ಪ್ರಯತ್ನಗಳು ನಡೆದುವು. ಆದರೆ ದೇಹದಾರ್ಢ್ಯತೆಯುಳ್ಳ ಆ ವ್ಯಕ್ತಿಯ ಎದುರು ವಿರೋಧಿಗಳ ಪ್ರಯತ್ನಗಳು ವಿಫಲವಾದುವು. ಶ್ರೀ ರುದ್ರಪ್ಪನವರು ಬರೀ ಮೈಯಲ್ಲೇ ಸಿದ್ಧಗಂಗೆಗೆ ಹಿಂದಿರುಗಿದರು. ಅಲ್ಲಿ ಅವರು ಶ್ರೀ ಅಡವೀ ಸ್ವಾಮಿಗಳ ತೋರುಗದ್ದಿಗೆಯನ್ನು ರಚಿಸಲು ಪ್ರಯತ್ನಿಸಿ ಅದನ್ನು ಪೂರ್ಣಗೊಳಿಸಿದರು. ಇದನ್ನು ಸಹಿಸದ ಸುತ್ತಮುತ್ತಲಿನ ಜನರು ಕೋಪೋದ್ರಿಕ್ತರಾಗಿ ಶ್ರೀ ಕ್ಷೇತ್ರದಲ್ಲಿನ ದೇವಸ್ಥಾನದ, ಸ್ವಾಮಿವಿಗ್ರಹದ ಕೈಕಾಲು ಮುರಿದು ಬಿಸುಟರು. ರುದ್ರಪ್ಪನವರಿಗೆ ಉತ್ತರಾಧಿಕಾರ ಸಲ್ಲದು ಎಂದು ಹಠ ಹಿಡಿದರು. ಶ್ರೀ ಅಡವೀಸ್ವಾಮಿಗಳು ವಿದ್ಯುಕ್ತವಾಗಿ ಇವರಿಗೆ ಆಶ್ರಮವೀಯದೆ ಶಿವೈಕ್ಯರಾದುದರಿಂದ ಜನರಿಗೆ ದಿಕ್ಕುತೋಚದಂತಾಗಿದ್ದಿತು. ಅಲ್ಲಿಯೂ ಪಕ್ಷಗಳು ಪ್ರಾರಂಭವಾಗಿ ಬಂಡೇಮಠದ ಚರಮೂರ್ತಿಗಳಿಂದ ಶ್ರೀ ರುದ್ರಪ್ಪನವರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ತಾರಾಧಿಕಾರ ಕೊಡಿಸಿದರು. ಮೊದಲಿನ ರುದ್ರಪ್ಪ ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಅಡವೀಸ್ವಾಮಿಗಳ ಉತ್ತರಾಧಿಕಾರಿಗಳಾದರು. ಅಂದಿನಿಂದ ಅವರು ಶ್ರೀಮನ್ನಿರಂಜನ ಉದ್ದಾನ ಶಿವಯೋಗಿಗಳೆಂದು ಪ್ರಸಿದ್ಧರಾದರು.

ಬಾಲ್ಯಾವಸ್ಥೆಯಿಂದ ಈವರೆಗೆ ಇವರನ್ನು ಎದುರಿಸಿದ ಘಟನೆಗಳೆಲ್ಲ ಇವರ ವೀರವಿರಕ್ತಿ, ಆಧ್ಯಾತ್ಮಿಕ ತೇಜೋವಿಶೇಷ ಮತ್ತು ತಪೋನಿಷ್ಠೆಗಳನ್ನು ಪರಿಸ್ಫುಟಗೊಳಿಸುವ ಘನ ಉದ್ದೇಶದಿಂದಲೇ ನಡೆದುವು. ಆದರೆ ಎಲ್ಲವನ್ನೂ





ರೂಪಿಸುವ ಭವ್ಯಭವಿಷ್ಯದಲ್ಲಿ ಅವೆಲ್ಲವೂ ಬಂದು ಸುಳಿದು ಹೋಗುವ ಅಭ್ರಚ್ಛಾಯೆಯೆಂತೆ ಕಂಡೂ ಕಾಣದಾದವು.

**ಮಠಾಧಿಪತ್ಯದ ಕಠಿಣಪರೀಕ್ಷೆ :**

ಮುನಿಗಳಾಗಿದ್ದು ಕಾರಣಪುರುಷರಾಗಿದ್ದರೂ ಸಹ ಮಾನವ ಸಹಜವಾದ ಕಾಠಿಣ್ಯ, ಕಾರ್ಪಣ್ಯಗಳು ಋಷಿಜೀವಿಗಳನ್ನು ಬಿಡಲಿಲ್ಲ. ಪಕ್ಷ ವಿಪಕ್ಷ ವಿಪ್ಲವಗಳ ನಡುವೆ ಮಠಾಧಿಪತ್ಯವನ್ನು ವಹಿಸಿಕೊಂಡ ಆದರ್ಶ ಮುನಿವ್ರತಿಗಳಾದ ಶ್ರೀ ಉದ್ದಾನಗುರುಗಳನ್ನು ವಿಧಿನಿಯಮಗಳು ಕಾಡತೊಡಗಿದವು. ಅನ್ನದಾನಕ್ಕೆ ಅವಕಾಶವಿಲ್ಲ. ವಿದ್ಯಾದಾನ ಮಾಡಲು ಅನುಕೂಲಗಳಿಲ್ಲ. ಸ್ಥಾನದಲ್ಲಿ ಸುಖವಿಲ್ಲ, ಶಾಂತಿಯಿಲ್ಲ, ಎಲ್ಲೆಲ್ಲೂ ವಿಪ್ಲವ. ಮಠಗಳನ್ನೂ ಮಠಾಧಿಪತಿಗಳನ್ನೂ ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನೋಡಿ ಅವರ ಆತ್ಮಪರೀಕ್ಷೆ ಮಾಡಿ ನೋಡಬೇಕು. ಗುರುಗಳು ಹಸುಬೆ ಚೀಲವನ್ನು ಹೊತ್ತು ಭಿಕ್ಷೆಗಾಗಿ ಪಾದಯಾತ್ರೆ ಹೊರಟರು. ಮೊದ ಮೊದಲು ಗಣನೆಗೆ ತಾರದ ಜನರಿಂದ 'ಮುಂದಕ್ಕೆ ಹೋಗಿ' ಎನ್ನುವುದನ್ನು ಕೇಳಿಯಾಯ್ತು. ಆದರೆ ಕಾಲಕ್ರಮೇಣ ಆತ್ಮಶಕ್ತಿಗಾಗಿ ಗುರುಕೃಪೆಯು ವಜ್ರಕವಚವಾಯಿತು. ಬ್ರಹ್ಮರಾಕ್ಷಸ ಘಟನೆ, ದೆವ್ವಪೀಡೆ-ಉಪಟಳ ಇವುಗಳಿಂದ ಬಿಡುಗಡೆ, ಈ ವಿಚಾರ ಶ್ರೀಗಳವರ ಮಹಿಮಾ ಜೀವನಕ್ಕೆ ಸ್ವಲ್ಪಮಟ್ಟಿಗೆ ಮೊದಮೊದಲು ನೆರವಾದರು. ಅವರ ಆದರ್ಶ, ನಿಗರ್ವ, ಆಚಾರವಿಚಾರ ಇವುಗಳಿಂದಾಗಿ ಬರಬರುತ್ತ ಶ್ರೀ ಸಿದ್ಧಗಂಗಾ ಕ್ಷೇತ್ರವು ಆದರ್ಶ ಪಾವನ ಕ್ಷೇತ್ರವಾಯಿತು. ಶಿವಯೋಗಿಗಳು ಮಹಾಮಹಿಮರಾಗಿ ಕಾಣಿಸತೊಡಗಿದರು. ಆನಂತರ ಶ್ರೀಗಳವರಿಂದ ಧಿನೇ ದಿನೇ ರೂಪುಗೊಂಡ ಕಟ್ಟಡ, ಅನ್ನದಾನ, ವಿದ್ಯಾದಾನ, ಅದರ್ಶದ ನೀತಿ ನಿಯಮಗಳು ಜನಮನದಲ್ಲಿ ಅದ್ಭುತ ಪರಿಣಾಮಗಳನ್ನು ಬೀರತೊಡಗಿದುದರ ಕಾರಣವಾಗಿ ಎಲ್ಲರೂ ಭಕ್ತಿಯಿಂದ ನಡೆಯುತ್ತ ನೆರವಾಗತೊಡಗಿದರು. ಅವರ ಆ ಲೋಕೋಪಕಾರಕ ಕಾರ್ಯಗಳು ಅಚ್ಚಳಿಯದ ಶಿಲಾಶಾಸನಗಳಂತಿವೆ. ಧನ, ದವಸ ಮೊದಲಾದವುಗಳ ಅಭಾವ, ತಾನಾಗಿ ಕರಗಿ ಬಹುಧಾನ್ಯ, ಬಹುಧನಗಳಿಗೆ ಅವಕಾಶ ಮಾಡಿಕೊಟ್ಟಿತ್ತು. ಅವರ ಮಹಿಮಾತಿಶಯ. 'ಅದಾನಂ ಹಿ ವಿಸರ್ಗಾಯ' ದಾನಕ್ಕಾಗಿಯೇ ಪರಿಗ್ರಹ, ಇದು ಶ್ರೀ ಸಿದ್ಧಗಂಗಾ ಕ್ಷೇತ್ರದ ಮೂಲಮಂತ್ರ, ಇದರೊಡನೆ ಈವರೆಗೂ ಪರಂಪರೆಯಿಂದ ಅಲ್ಲಿಗೆ ಬಂದಿರುವ ಆದರ್ಶ ಗುರುಮೂರ್ತಿಗಳು ಅದಕ್ಕೆ ತಾರಕಮಂತ್ರವಾಗಿದ್ದಾರೆ.

**ಉತ್ತರಾಧಿಕಾರ :**

ತಮ್ಮ 25ನೇ ವಯಸ್ಸಿನಿಂದ 80 ವರ್ಷಗಳ ಕೊನೆಯವರೆಗೂ ಉದ್ದಾನಶಿವಯೋಗಿಗಳು ಅನ್ವರ್ಥನಾಮ ಪಡೆದು ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಆದರ್ಶ ಕ್ಷೇತ್ರವನ್ನಾಗಿ ಮಾಡಿದರು. ಈ ಸಮಯದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಆಲೇನಹಳ್ಳಿಯಿಂದ ಅಭ್ಯಾಸ ಮಾಡಲು ಬಂದ ಶ್ರೀ ಮರುಳಸಿದ್ಧಯ್ಯ ಎಂಬ ವಟುವು, ಶ್ರೀ ಮರುಳಾರಾಧ್ಯ ಎಂಬ ಹೆಸರಿನಿಂದ ಶ್ರೀ ಉದ್ದಾನಶಿವಯೋಗಿಗಳ ಉತ್ತರಾಧಿಕಾರಿಗಳಾದರು. ಸುಮಾರು ಹತ್ತು ವರ್ಷಗಳ ಕಾಲ ವೇದ, ಸಂಸ್ಕೃತಗಳಲ್ಲಿ ಉತ್ತಮ ಪಾಂಡಿತ್ಯ ಪಡೆದು ಉತ್ತಮ ವಾಗ್ಮಿಗಳೂ, ವಾಚಾಳಿಗಳೂ ಆದ ಮರುಳಾರಾಧ್ಯರು ಹಿರಿಯ ಗುರುಗಳಿಗೆ ಮೆಚ್ಚುಗೆಯ ಶಿಷ್ಯರಾದರು.

**ಒಂದು ಕಿವಿ ಮಾತು :**

ಒಂದು ಸಂಜೆ ನಡೆದ ಘಟನೆ. ನಾನು ಶ್ರೀ ಕ್ಷೇತ್ರದ ಛತ್ರದಲ್ಲಿ ವಾಸಿಸುತ್ತಿದ್ದೆ. ಶ್ರೀ ಸ್ವಾಮಿಯ ಪೂಜೆಗೆಂದು ಬಿಲ್ವ ಪತ್ರೆಗಳನ್ನು ಎತ್ತುತ್ತಿದ್ದ ನಾನು ಅವನ್ನು ದೇವಸ್ಥಾನಕ್ಕೆ ಕೊಡಲು ಬಹುಶಃ ಬೆಟ್ಟಕ್ಕೆ ಹೋಗುತ್ತಿದ್ದೆ. ಮೇಲಿನಿಂದ ಯಾರೋ ಇಬ್ಬರು ಕಾವಿ ಹೊದ್ದು ತಲೆಯನ್ನು ಮುಚ್ಚಿಕೊಂಡು ಪರಸ್ಪರ ಮಾತನಾಡಿಕೊಳ್ಳುತ್ತ ಇಳಿದು ಬರುತ್ತಿದ್ದರು. ಯಾರೋ ಏನೋ ನಾನು ಗಮನಿಸಿರಲಿಲ್ಲ. ಸಮೀಪಿಸಿದಾಗ ಕೇಳಿಬಂದ 'ಹುಂ'ಕಾರದಿಂದ ಇವರು ದೊಡ್ಡ ಶ್ರೀಗಳೇ ಎಂದು ದೃಢವಾಗಿ ಮೈ ಝುಂ ಎಂದಿತು. ಹಿಂದೂ ಹೋಗುವಂತಿಲ್ಲ. ಮುಂದೂ ಹೋಗುವಂತಿಲ್ಲ. ಅಲ್ಲೇ ನಿಂತೆ. ಆ ಉದಾತ್ತ ವ್ಯಕ್ತಿಗಳಿಬ್ಬರೂ ನನ್ನನ್ನು ಮಾತನಾಡಿಸಲೇ ಇಲ್ಲ. ಆದರೆ ಸ್ಪಷ್ಟವಾದ ಕೆಲವು ಮಾತುಗಳು ನನಗೆ ಕೇಳಿಸಿದವು.

"........ ಹಾಗಾದರೆ ಈಗ ಏನಪ್ಪಣೆ? ಬೇಡವೇ? ...... ಏಕೆ ಬೇಡ? .........ಬಿಟ್ಟು ಬಿಡಲೇನು? ......... ಲೇ ......... ನಿನಗೆ ಬೇಡವಾದರೆ ನನಗೂ ಬೇಡ. ............ ಕರೆದುಕೊಂಡು ಹೋಗು ಹೋಗು'. ಎಂದು ನಮ್ಮ ಗುರುಗಳು ಆಕಾಶಭಾಷಣ ಮಾಡಿದರು.

ಇತ್ತ ಶ್ರೀಮರುಳಾರಾಧ್ಯರು ಶಿವೈಕ್ಯರಾದರು. ಈ ದೈವ ದುರ್ಘಟನೆಯಾಗುವ ವೇಳೆಗೆ ಹತ್ತು ವರ್ಷಗಳ ಕಾಲ ಅವರು ದೊಡ್ಡ ಗುರುಗಳ ಉತ್ತರಾಧಿಕಾರತ್ವದ ಸ್ಥಾನವನ್ನು ಹೊಂದಿದ್ದರು.

ಈ ಘಟನೆ ನಗ್ನಸತ್ಯ. ಆ ಮತ್ತೊಂದು ವ್ಯಕ್ತಿ ಯಾರೆಂಬುದು ಈಗಲು ತಿಳಿಯದ ವಿಚಾರ. ಆದರೆ ಶ್ರೀ ಉದ್ದಾನ ಶಿವಯೋಗಿಗಳು ಮಾನವರಾದರೂ ಅತಿ ಮಾನವರೊಡನೆ ಸಂಪರ್ಕವಿಟ್ಟಿದ್ದರೆಂಬುದು ಲೇಖಕನ ನಂಬಿಕೆ. ಅವರು ಶ್ರೀ ದೊಡ್ಡಸಿದ್ದಪ್ಪ ಮತ್ತು ಚಿಕ್ಕಸಿದ್ದಪ್ಪ ಎಂದು ರಾಮದೇವರ ಬೆಟ್ಟದಲ್ಲಿ ಈಗಲೂ ತಪೋಮಗ್ನರಾಗಿರುವ ಮುನಿಪುಂಗವರೆಂದು ಪ್ರತೀತಿ. ಅಲ್ಲದೇ ಅವರು ಬೇತಾಳವನ್ನೂ ವಶಪಡಿಸಿಕೊಂಡಿದ್ದರೆಂದು ಹೇಳುತ್ತಾರೆ. ಆ ಎರಡನೆಯ ವ್ಯಕ್ತಿ ಇವರಲ್ಲಿ ಒಬ್ಬರಿರಬೇಕೆಂದು ಈಗ ಲೇಖಕನ ಅನಿಸಿಕೆ. ಈ ಅತಿಮಾನವ ಸಂಪರ್ಕ ಅವರ ಮುನಿವ್ರತದ ಫಲವೆನ್ನದೆ ತೀರದು. ಕಾರಣ ಪುರುಷರಾಗಿ ಹುಟ್ಟಿ ಬ್ರಹ್ಮರಾಕ್ಷಸ ತಿಳಿಸಿದಂತೆ ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಬೆಳಗಲು ಅವರು ದೈವಪ್ರೇರಿತರಾಗಿ ಮಾನವ ಜನ್ಮವನ್ನು ಪಡೆದಿದ್ದರೆಂಬುದು ಒಂದು ವಾದ.

**ಪುನಃ ಉತ್ತರಾಧಿಕಾರಿ :**

1930ರಲ್ಲಿ ಶ್ರೀ|| ನಿ|| ಪ್ರ|| ಸ್ವ|| ಶ್ರೀ ಮರುಳಾರಾಧ್ಯರು ಶಿವೈಕ್ಯರಾದ ಮೇಲೆ ಶ್ರೀ ಮನ್ನಿರಂಜನ ಪ್ರಣಮ ಸ್ವರೂಪಿ ಉದ್ದಾನಸ್ವಾಮಿಗಳು ಸಮಚಿತ್ತರಂತೆ ಕಂಡುಬಂದರು. ಆ ವರ್ಷದ ಜಾತ್ರೆ ನಡೆಯುವ ಮೊದಲು ಶ್ರೀ ಮರುಳಾರಾಧ್ಯರ ಸಮಾಧಿ ಕಾರ್ಯಗಳು ನಡೆಯುತ್ತಿರುವಾಗ ಹಠಾತ್ತನೆ ಶ್ರೀ ಶಿವಣ್ಣನವರು ಶಿವಗಂಗೆಯ ಹತ್ತಿರದ ವೀರಾಪುರದ ನಿವಾಸಿಗಳು. ಶ್ರೀಗಳು ಅವರನ್ನೇ ತಮ್ಮ ಕೃಪಾಪಾತ್ರರಾಗಲು ಅರ್ಹರೆಂದು ದಿವ್ಯದೃಷ್ಟಿಯಿಂದ ಕಂಡಿದ್ದರು. ಶ್ರೀಮರುಳಾರಾಧ್ಯರ ಸಮಾಧಿ ವೇಳೆಯಲ್ಲಿ ಶ್ರೀ ಶಿವಣ್ಣನವರಿಗೆ ಉದ್ದಾನ ಸ್ವಾಮಿಗಳು 'ಶಿವಣ್ಣ ನಮಸ್ಕಾರ ಹಾಕು' ಎಂದು ಪೂರ್ವ ಸೂಚನೆಯಿಲ್ಲದೆಯೇ ಅಪ್ಪಣೆ ಮಾಡಿದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ.ಗೆ ವ್ಯಾಸಂಗ ಮಾಡುತ್ತಿದ್ದ ಶ್ರೀ ಶಿವಣ್ಣನವರು ಸಮಾಧಿ ಕಾರ್ಯದಲ್ಲಿ ಪಾಲ್ಗೊಳ್ಳಲು ಬಂದಿದ್ದರು. ಬಿ.ಎ. ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿದ್ದ ಅವರು ಶ್ರೀಗಳ ಅಪ್ಪಣೆಯನ್ನು ಪಡೆಯಲು ಅವಕಾಶವಿಲ್ಲದೆ ಒಪ್ಪಬೇಕಾದ ಪರಿಸ್ಥಿತಿಯುಂಟಾಯಿತು. ಮುನಿವ್ರತವೋ. ವೀರವಿರಕ್ತಿಯೋ, ಯೋಗಸಿದ್ಧಿಯೋ ಅಂತೂ ಶ್ರೀಗಳ ಅಪ್ಪಣೆಯನ್ನು ಮೀರುವಂತೆಯೇ ಇಲ್ಲ. ಅವರ ಆಜ್ಞೆಯಂತೆ ನಮಸ್ಕಾರ ಮಾಡಿದರು. ಆ ವರ್ಷದ ಜಾತ್ರೆಯಲ್ಲೇ ಅವರ ಆಶ್ರಮ ಸ್ವೀಕಾರ ಜರುಗಿತು. ಸುಮಾರು 11 ವರ್ಷಗಳು ಶ್ರೀ ಮನ್ನಿರಂಜನ ಉದ್ದಾನ ಶಿವಯೋಗಿಗಳ ಮಾರ್ಗ ದರ್ಶನವು ನೂತನ ಶ್ರೀಗಳಿಗೆ ದೊರಕಿತು. ಶ್ರೀ ಶಿವಣ್ಣನವರು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶಿವಕುಮಾರಸ್ವಾಮಿಗಳೆಂಬ ದಿವ್ಯನಾಮಾಂಕಿತ ರಾದರು.

*'ಹರ ತನ್ನ ಭಕ್ತರ ತಿರಿವಂತೆ ಮಾಡುವ;*
*ಒರೆದು ನೋಡುವ ಸುವರ್ಣದ ಚಿನ್ನದಂತೆ,*
*ಅರೆದು ನೋಡುವ ಕಬ್ಬಿನ ಕೋಲಿನಂತೆ;*
*ಅರಿದು ನೋಡುವ ಶ್ರೀಗಂಧದಂತೆ,*
*ಬೆದರದೆ ಬೆಚ್ಚದೆಯಿದ್ದರೆ ಕರವಿಡಿದೆತ್ತಿಕೊಂಬ*
*ರಾಮನಾಥ'*

ಎಂಬಂತೆ ಕೆಲವುಕಾಲ ಕಳೆದ ಮೇಲೆ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶಿವಕುಮಾರಸ್ವಾಮಿಗಳ ಅಧಿಕಾರಾವಧಿಯಲ್ಲಿ ಶ್ರೀ ಕ್ಷೇತ್ರದ ಸುವರ್ಣಯುಗವು ಆರಂಭವಾಯಿತು. ಕಾಲವು ಹೇಗೆ ಇರಲಿ, ವಿದ್ಯಾರ್ಥಿಗಳ ಸಂಖ್ಯೆ 100ರಿಂದ 4000ಕ್ಕೇರಿತು. ಅನ್ನದಾನ ಮಿಗಿಲಾಯಿತು. ಮಾಧ್ಯಮಿಕ ಶಾಲೆಗಳು ಪ್ರೌಢಶಾಲೆಗಳು ಈ ಕ್ಷೇತ್ರದಲ್ಲೂ ಕ್ಷೇತ್ರದ ವತಿಯಿಂದ ಬೇರೆ ಬೇರೆ ನಗರ ಗ್ರಾಮಗಳಲ್ಲೂ ಪ್ರಾರಂಭವಾದವು. ತುಮಕೂರಿನಲ್ಲಿ ಒಂದು ಸೈನ್ಸ್ ಕಾಲೇಜು, ಅದಕ್ಕೂ ಮಿಗಿಲಾಗಿ ಒಂದು ಇಂಜಿನಿಯರಿಂಗ್ ಕಾಲೇಜು ಸಹ ಪ್ರಾರಂಭವಾಯಿತು. ದೇಶ ಆಹಾರ ಧಾನ್ಯಗಳ ವಿಷಯದಲ್ಲಿ ಕಷ್ಟಕ್ಕೆ ಗುರಿಯಾಗಿದ್ದರೂ ಶ್ರೀ ಶಿವಕುಮಾರಸ್ವಾಮಿಗಳ ಕ್ಷೇತ್ರಾಭಿವೃದ್ಧಿ ಕಾರ್ಯಕ್ರಮಗಳಿಗೆ ಯಾವುದೇ ರೀತಿಯ ಅಡೆತಡೆಯುಂಟಾಗಲಿಲ್ಲ. ಶ್ರೀಗಳವರ ಪ್ರಭಾವ ಪ್ರತಿಭೆಗಳು ದೇಶದ ಸಾಮಾಜಿಕ ವಿಷಯಗಳಲ್ಲಿ ಪ್ರವೇಶಮಾಡಿ ಅವರ ಅಭ್ಯುದಯಕ್ಕಾಗಿ ದಾರಿ ಮಾಡಿದವು. ಒಟ್ಟಿನಲ್ಲಿ ಶ್ರೀ ಶಿವಕುಮಾರಸ್ವಾಮಿಗಳು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸುವರ್ಣ ಯುಗವನ್ನು ಪ್ರಾರಂಭಿಸಿ ಅಭಿವೃದ್ಧಿಗೊಳಿಸಿದರು. ಒಂದು ಮಾತಿನಲ್ಲಿ ಹೇಳುವುದಾದರೆ ಶ್ರೀ|| ನಿ|| ಪ್ರ|| ಸ್ವ|| ಶ್ರೀ ಶಿವಕುಮಾರಸ್ವಾಮಿಗಳನ್ನು ಪೂಜೆಗೆ ಬಿನ್ನಹ ಹಾಕುವುದು, ಭಾಷಣಕ್ಕೆ ಆಹ್ವಾನಿಸುವುದು ಇತ್ಯಾದಿಗಳೆಲ್ಲ ಜನಸ್ತೋಮಕ್ಕೆ ಒಂದು ಹೆಮ್ಮೆಯ ಕೆಲಸವಾಯಿತು. ವೀರವಿರಕ್ತರೂ ಶಾಂತಿ ಸಾಗರರೂ ಆದ ಶ್ರೀಗಳು ಎಲ್ಲವನ್ನೂ ಸಮದೃಷ್ಟಿಯಲ್ಲಿ ನೋಡಿ ತಮ್ಮ ಭಾಷಣದಲ್ಲಿ ಕೀರ್ತಿ ಪಡೆದರು, ಯಾವ ನ್ಯೂನತೆಗೂ ಹೆದರಿ ಪರರನ್ನು ಬೇಡಿಲ್ಲ. ಯಾರನ್ನೂ ಬೇಡದಂತೆ ಶ್ರೀ ಗುರು ಅವರಿಗೆ ಅಭಯಹಸ್ತ ನೀಡಿದ್ದಾನೆ. *





## ಗಣರಾಜ್ಯದಿನ

-ಡಾ|| ಎಚ್. ತಿಪ್ಪೇರುದ್ರಸ್ವಾಮಿ

ನಮ್ಮ ರಾಷ್ಟ್ರದ ಇತಿಹಾಸದಲ್ಲಿ ಆಗಸ್ಟ್ 15 ಒಂದು ದೃಷ್ಟಿಯಿಂದ ಮಹತ್ವದ ದಿನವಾದರೆ ಇನ್ನೊಂದು ದೃಷ್ಟಿಯಿಂದ ಜನವರಿ 26 ಸ್ಮರಣೀಯವಾದ ದಿನವಾಗಿದೆ. ಒಂದು ನಾವು ಸ್ವಾತಂತ್ರ್ಯವನ್ನು ಪಡೆದ ದಿನ, ಇನ್ನೊಂದು ಆ ಸ್ವಾತಂತ್ರ್ಯವನ್ನು ರೂಢಿಸಿಕೊಳ್ಳುವುದಕ್ಕಾಗಿ ನಮ್ಮದೇ ಆದ ರಾಜ್ಯಾಂಗವನ್ನು ರೂಪಿಸಿಕೊಂಡು ಅದರಡಿಯಲ್ಲಿ ವಿಪುಲ ವೈವಿಧ್ಯಗಳಿಂದ ಕೂಡಿದ ಈ ಬೃಹತ್ ರಾಷ್ಟ್ರವನ್ನು ಒಂದು ಗಣರಾಜ್ಯವನ್ನಾಗಿ ಪೋಷಿಸಿಕೊಂಡ ದಿನ. ಈಗಾಗಲೇ ಆರು ದಶಕಗಳಿಗಿಂತಲೂ ಹೆಚ್ಚುಕಾಲ ಈ ಗಣರಾಜ್ಯ ಪ್ರಜಾಪ್ರಭುತ್ವದ ಮಾರ್ಗದಲ್ಲಿ ನಡೆದು ಬಂದಿದೆ.

ಈ ದೇಶ ಮೂಲಭೂತವಾದ ಸಾಂಸ್ಕೃತಿಕ ಮೌಲ್ಯಗಳ ದೃಷ್ಟಿಯಿಂದ ಆಸೇತು ಹಿಮಾಚಲಪರ್ಯಂತ ಒಂದು ರಾಷ್ಟ್ರವಾಗಿದ್ದರೂ, ಆಚಾರ ವಿಚಾರಗಳಲ್ಲಿ, ನಡೆ ನುಡಿಗಳಲ್ಲಿ, ಕೊನೆಗೆ ಉಡುಗೆ ತೊಡುಗೆ, ಆಹಾರ ವಿಹಾರಗಳಲ್ಲಿಯೂ ಕೂಡ ಆಶ್ಚರ್ಯಕರವಾಗುವಷ್ಟು ವೈವಿಧ್ಯವನ್ನುಳ್ಳ ಸಂಕೀರ್ಣ ಜನಪದದಿಂದ ಕೂಡಿದೆ. ಅಲ್ಲದೇ ಒಂದೇ ರಾಜಕೀಯ ಆಡಳಿತ ಇಲ್ಲಿ ಇರಲಿಲ್ಲ, ನೂರಾರು ರಾಜರುಗಳ ಆಡಳಿತಕ್ಕೆ ಇದು ಒಳಗಾಗಿತ್ತು. ಮುಸ್ಲೀಮರ ಆಗಮನದಿಂದ ಉಂಟಾದ ಸಾಂಸ್ಕೃತಿಕ ಸಂಘರ್ಷಣೆ ಒಂದು ರೀತಿಯ ಸಾಮಾಜಿಕ ಮತ್ತು ರಾಜಕೀಯ ಪರಿವರ್ತನೆಗೆ ಕಾರಣವಾಗಿದ್ದರೂ ಹಿಂದಿನ ಸಂಪ್ರದಾಯದ ಶೃಂಖಲೆಗಳು ಹಾಗೇ ಉಳಿದು ಬಂದಿದ್ದವು. ಧರ್ಮದ ಹೆಸರಿನಲ್ಲಿ ತಾರತಮ್ಯಗಳೂ, ಅಂಧ ಶ್ರದ್ಧೆಗಳೂ ಹಾಗೇ ಬೆಳೆದು ಬಂದಿದ್ದವು. ಆಂಗ್ಲರ ಆಗಮನದಿಂದ ಇನ್ನೊಂದು ಹೊಸ ಪರಿವರ್ತನೆ ಪ್ರಾರಂಭವಾಯಿತು. ಇಂಗ್ಲೀಷ್ ವಿದ್ಯಾಭ್ಯಾಸ ಇದಕ್ಕೆ ಪ್ರಚೋದಕ ಶಕ್ತಿಯಾಯಿತು. ರಾಜಾರಾಮ ಮೋಹನರಾಯರಂಥವರ ವಿಚಾರಕ್ರಾಂತಿಗೆ ಇದು ಕಾರಣವಾಯಿತು. ಧರ್ಮದ ಹೆಸರಿನಲ್ಲಿದ್ದ ಸಂಪ್ರದಾಯಗಳ ಬೇರು ಸಡಿಲವಾಗಿ ಜನಸಾಮಾನ್ಯರ ಯುಗ ಸರ್ವಸಮಾನತೆಯ ಆಧಾರದ ಮೇಲೆ ಬೆಳೆಯ ತೊಡಗಿತು.

ಇದರ ಜೊತೆಯಲ್ಲಿ ಇನ್ನೊಂದು ಅಪಾಯವೂ ಸಂಭವಿಸಿತು. ಅದೇಂದರೆ ಅಂಧಶ್ರದ್ಧೆಗೆ ಬದಲು ಅಂಧಾನುಕರಣೆ ತಲೆದೋರಿದುದು. ಇಂಗ್ಲೀಷ್ ವಿದ್ಯಾಭ್ಯಾಸ ಹೊರಜಗತ್ತಿನ ಸಂಪರ್ಕದಿಂದ ದೃಷ್ಟಿಯನ್ನು ವಿಶಾಲಗೊಳಿಸಿತೆಂಬುದೇನೋ ನಿಜ; ಆದರೆ ಅದು ನಮ್ಮವರನ್ನು ನಮ್ಮ ಮನೆಯಲ್ಲಿಯೇ ಪರಕೀಯರನ್ನಾಗಿಸಿತು. ರಾಷ್ಟ್ರ ಜೀವನದ ಚೈತನ್ಯಶಕ್ತಿಯನ್ನೇ ಹೀರಿ ನಿಸ್ಸತ್ವಗೊಳಿಸಿತು. ರಾಜಕೀಯ ದಾಸ್ಯದ ಜೊತೆಗೆ ಆರ್ಥಿಕ ಮತ್ತು ಸಾಂಸ್ಕೃತಿಕ ದಾಸ್ಯಕ್ಕೂ ನೂಕಿತು. ಹಿಂದಿದ್ದ ಪುರೋಹಿತಶಾಹಿಯ ಹಿಡಿತ ಸಡಿಲವಾದರೂ, ಆಧುನಿಕ ಆಂಗ್ಲ ಪುರೋಹಿತ ವಿಜೃಂಭಿಸಿತು. ಬೌದ್ಧಿಕ ದಾಸ್ಯದ ಅನುಕರಣಶೀಲರನ್ನು ಸೃಷ್ಟಿಸುವ ಯಂತ್ರವಾಯಿತು. ನಮ್ಮ ವಿದ್ಯಾಭ್ಯಾಸ ನಮ್ಮ ಸ್ವಾತಂತ್ರ್ಯದ ಹೋರಾಟ, ರಾಜಕೀಯ ದಾಸ್ಯಕ್ಕೆ ಮಾತ್ರ ಸೀಮಿತವಾಗದೆ ಇವೆಲ್ಲವುಗಳ ವಿರುದ್ಧ ನಡೆಯಬೇಕಾಗಿತ್ತು. ಇದನ್ನು ಗಾಂಧೀಜಿ ಮತ್ತೆ ಮತ್ತೆ ಸ್ಪಷ್ಟಪಡಿಸಿದರು. ರಚನಾತ್ಮಕ ಕಾರ್ಯಗಳ ಮೂಲಕ ಆ ಹೋರಾಟದ ದಿಗಂತಗಳನ್ನು ವಿಸ್ತರಿಸಲು ನಿರಂತರ ಪ್ರಯತ್ನ ನಡೆಸುತ್ತಲೇ ಬಂದರು.

1947ರ ಆಗಸ್ಟ್ 15ರಂದು ನಮಗೆ ಬಂದ ಸ್ವಾತಂತ್ರ್ಯ ಸಂಪೂರ್ಣ ಸ್ವಾತಂತ್ರ್ಯವಲ್ಲ. ಅದು ಕೇವಲ ರಾಜಕೀಯ ಸ್ವಾತಂತ್ರ್ಯ. ಅದು ನಮ್ಮ ಮುಂದಿನ ಎಲ್ಲಾ ಹೋರಾಟಕ್ಕೂ ಅಗತ್ಯವಾದ ಅನಿವಾರ್ಯ ಅಂಶವಾಗಿತ್ತು. ಬದುಕುವುದಕ್ಕೆ ಉಸಿರಾಟದಷ್ಟು ಅನಿವಾರ್ಯವಾಗಿತ್ತು. ಆ ರಾಜಕೀಯ ಸ್ವಾತಂತ್ರ್ಯ, ಆದರೆ ಉಸಿರಾಡುವುದೊಂದೇ ಬದುಕಿನ ಸಾರ್ಥಕತೆಯಲ್ಲ; ಶೋಷಣೆ, ಸಾಮಾಜಿಕ ಅಸಮತೆ ವಿಷಮತೆಗಳನ್ನು ತೊರೆದು ಸರ್ವ ಸಮಾನತೆಯ ಆಧಾರದ ಮೇಲೆ ಸರ್ವೋದಯ ಸಮಾಜಕ್ಕೆ ಕಾರಣವಾಗುವ ಮತ್ತು ಸ್ವಾವಲಂಬನೆಯ ಮೌಲ್ಯಗಳನ್ನು ರೂಢಿಸುವ ಮೂಲಭೂತ ಬದಲಾವಣೆ ನಮಗೆ ಬರಬೇಕಾಗಿತ್ತು. ಅದಕ್ಕಾಗಿ ನಮ್ಮದೇ ಆದ ರಾಜ್ಯಾಂಗವನ್ನು ರೂಪಿಸಿಕೊಂಡು ಅದನ್ನು ಕಾರ್ಯಗತಗೊಳಿಸಲು ಸಿದ್ಧರಾದ ದಿನ, ಬದ್ಧರಾದ ದಿನ ಈ ಜನವರಿ 26.

ಈ ನಮ್ಮ ಸಾಧನೆಯ ಸೇತುವೆಯ ಕೆಳಗೆ ಈಗಾಗಲೇ ಬಹಳಷ್ಟು ನೀರು ಹರಿದು ಹೋಗಿದೆ. ಸಮಸ್ಯೆಗಳ ಹುತ್ತವಾಗಿಯೇ ಮೈವೆತ್ತ ಈ ಸ್ವಾತಂತ್ರ್ಯ, ಸಾವಿರ ಹೆಡೆಗಳನ್ನು ಮೇಲೆತ್ತಿತು. ಅವುಗಳನ್ನೆಲ್ಲಾ ಏಕಕಾಲದಲ್ಲಿ ಬಗೆಹರಿಸುವ ಮಾಂತ್ರಿಕದಂಡ ಇರಲಿಲ್ಲ. ಆದರೆ ಅವುಗಳನ್ನು

ದಿಟ್ಟತನದಿಂದ ಈ ರಾಷ್ಟ್ರ ಎದುರಿಸಿತು. ವಿಶ್ವದ ಬಹುದೊಡ್ಡ ಪ್ರಜಾಪ್ರಭುತ್ವ ವಾಗಿ ಇಡೀ ಜಗತ್ತಿನ ಗಮನವನ್ನೇ ಸೆಳೆಯಿತು. ಈ ವಿಚಾರದಲ್ಲಿ ನಾವು ಹೆಮ್ಮೆಪಟ್ಟುಕೊಳ್ಳಬಹುದೆಂಬುದು ನಿಜ. ಆದರೆ ಅಂತಾರಾಷ್ಟ್ರೀಯವಾಗಿ ನಾವು ಬಹಳ ಮೇಲಕ್ಕೇರಿದರೂ, ಆಂತರಿಕ ವ್ಯವಹಾರಗಳಲ್ಲಿ ಕುಂಟಿದೆವು, ನಮ್ಮ ದೌರ್ಬಲ್ಯಗಳನ್ನು, ಬಿರುಕುಗಳನ್ನು ಬಿಟ್ಟು ಹೊರಬರುವುದರಲ್ಲಿ ಆಲಸ್ಯವನ್ನು ತೋರಿಸಿದೆವು. ಗಾಂಧೀಜಿ ಬಯಸಿದ ಮೂಲಭೂತ ಬದಲಾವಣೆಯ ಬೆಳಕು ಬರಲಿಲ್ಲ, ಜಯಪ್ರಕಾಶನಾರಾಯಣ ಅವರು ಹೇಳಿದ ಸಮಗ್ರ ಕ್ರಾಂತಿಯ ಕಿಡಿ ಸಿಡಿಯಲಿಲ್ಲ. ಆಂಗ್ಲರನ್ನು ಓಡಿಸಿದರೆ ಸಾಲದು, ನಮ್ಮ ಮಾನಸಿಕ ದಾಸ್ಯವನ್ನು ಅಳಿಸಬೇಕು. ಬೌದ್ಧಿಕ ಪರಾವಲಂಬನೆಯನ್ನು ಕಿತ್ತೆಸೆಯಬೇಕು. ನಾವು ನಾವಾಗಿ ಬೆಳೆಯುವ ಆತ್ಮವಿಶ್ವಾಸ, ಅಂತರ ನಿರೀಕ್ಷಣೆ ನಮಗಿನ್ನೂ ಬರಬೇಕಾಗಿದೆ. ಅದು ಬಾರದೇ ಇರುವುದು ನಾವಿನ್ನೂ ಅಂದಿನ ದಾಸ್ಯದಲ್ಲೇ ಇದ್ದೇವೆಂಬುದರ ದ್ಯೋತಕವಾಗುತ್ತದೆ.

ಈ ಕಾರಣದಿಂದಲೇ ನಮ್ಮ ಯಾವ ಸಮಸ್ಯೆಗಳನ್ನೂ ನಾವು ಬಗೆಹರಿಸಿಕೊಳ್ಳಲು ಸಾಧ್ಯವಾಗಿಲ್ಲ. ಅವುಗಳನ್ನು ಮುಂದೂಡುತ್ತಾ ಬಂದಿದ್ದೇವೆ. ಇನ್ನೂ ಹೆಚ್ಚು ಸಂಕೀರ್ಣಗೊಳಿಸುತ್ತಾ ಬಂದಿದ್ದೇವೆ. ಭಾಷೆಯ ಹೆಸರಿನಲ್ಲಿ, ಜಾತಿಯ ಹೆಸರಿನಲ್ಲಿ, ಪ್ರಾಂತ್ಯ ಪ್ರಾಂತ್ಯಗಳ ಪರಸ್ಪರ ಸಂಬಂಧದಲ್ಲಿ ಸೃಷ್ಟಿಸಿಕೊಳ್ಳುತ್ತಿರುವುದಕ್ಕೆ ಇದೇ ಕಾರಣ. ಧರ್ಮದ ಹೆಸರಿನಲ್ಲಿದ್ದ ಹಳೆಯ ಕೊಳೆಯನ್ನು ಕಳೆದುಕೊಳ್ಳುವುದು ಇನ್ನೂ ಸಾಧ್ಯವಾಗಿಲ್ಲ. ಮೊದಲಿನಿಂದಲೂ ನಮ್ಮ ದೌರ್ಬಲ್ಯವೆಂದರೆ ದೊಡ್ಡ ತತ್ತ್ವಗಳನ್ನಿಟ್ಟುಕೊಂಡು ಸಣ್ಣವರಾಗಿ ಬದುಕುವುದು. ಶ್ರೀಮಂತಿಕೆಯ ಮಧ್ಯದಲ್ಲಿ ದರಿದ್ರರಾಗಿರುವುದು; ಭೌತಿಕ ಸಂಪತ್ತಿನಿಂದ ಹಿಡಿದು ಸಾಂಸ್ಕೃತಿಕ ಸಂಪತ್ತಿನವರೆಗೂ ಈ ಮಾತು ಅನ್ವಯಿಸುತ್ತದೆ. ಈ ದೇಶ ನನ್ನದು, ಈ ಜನ ನನ್ನದು ಎಂಬ ಭಾವನೆ ಬೆಳೆಯುವುದಕ್ಕೆ ಇದು ಅಡ್ಡಿಯಾಗಿದೆ. ಉರಿಯುತ್ತಿರುವ ಮನೆಯಲ್ಲಿ ಹಿರಿದದ್ದೇ ಲಾಭ ಎನ್ನುವ ಸರ್ವಭಕ್ಷಕ ಪ್ರವೃತ್ತಿ ಎಲ್ಲವನ್ನು ನುಂಗಿ ಹಾಕಿದೆ. ಈಗ ಎಲ್ಲಕ್ಕಿಂತ ಹೆಚ್ಚು ತುರ್ತಾಗಿ ಆಗಬೇಕಾದುದು ಇದನ್ನು ಮೆಟ್ಟಿ ನಿಲ್ಲುವ ಸಾಮೂಹಿಕ ಸಂಕಲ್ಪ. ದಿಲ್ಲಿಯ ಅಧಿಕಾರದ ತುತ್ತತುದಿಯಿಂದ ಹಿಡಿದು ಹಳ್ಳಿಯ ಸಾಮಾನ್ಯನ ಕೊಟ್ಟ ಕೊನೆಯುವರೆಗೂ ಈ ಸರ್ವೋದಯ ಆಗಬೇಕಾಗಿದೆ. ಗಣರಾಜ್ಯ ದಿನಾಚರಣೆಯ ಈ ಮಹತ್ವದ ದಿನದಂದು ಆ ಪವಿತ್ರ ಸಂಕಲ್ಪವನ್ನು ಕೈಗೊಳ್ಳಬೇಕಾಗಿದೆ.

## ಇಷ್ಟಲಿಂಗವು ಜಾತಿಯ ಕುರುಹು ಅಲ್ಲ



ಪಾದರಸದಂತೆ ಚಂಚಲವಾದ ಮನಸ್ಸನ್ನು ಹತೋಟಿಯಲ್ಲಿ ಇಡಲು ಜನರು ಸ್ಥಾವರಲಿಂಗವನ್ನು ಹುಡುಕುತ್ತ ಹೋಗುತ್ತಿದ್ದರು. ಸ್ಥಾವರಲಿಂಗ ಮತ್ತು ಸಾಧಕನ ಮಧ್ಯ ಅರ್ಚಕನಿರುವುದರಿಂದ ಸಾಧನೆಗೆ ಅನುಕೂಲವಲ್ಲ, ಶಾಂತಿ ಮತ್ತು ಆತ್ಮಜ್ಞಾನವನ್ನು ಸಂಪಾದಿಸಲು ಒಂದು ಸಾಧನ ಬೇಕಾಗಿದೆ ಎಂದು ಬಸವಣ್ಣನವರು ಬ್ರಹ್ಮಾಂಡದಂತೆ ಗೋಲಾಕಾರವಾದ ಇಷ್ಟಲಿಂಗವನ್ನು ನಿರೂಪಿಸಿದರು.

ಇಷ್ಟಲಿಂಗ ದೇವನ ಕುರುಹು, ಕುರುಹಿನಿಂದ ಅರಿವು ಪಡೆಯಲು ಸಾಧ್ಯ. ಇಷ್ಟಲಿಂಗವು ಪರಮಾತ್ಮನನ್ನು ನೋಡುವ, ಆನಂದಿಸುವ ಮತ್ತು ಅನುಭವಿಸುವ ಸುಲಭ ಸಾಧನವಾಗಿದೆ.

ನಿರಾಕಾರವಾದ ಪರಶಿವನು ಸಾಕಾರರೂಪವಾಗಿ ಇಷ್ಟಲಿಂಗದ ಮಾಧ್ಯಮದಲ್ಲಿ ಕರಸ್ಥಲಕ್ಕೆ ಬಂದು ಚುಳುಕಿದನು ಎಂದು ಬಸವಣ್ಣನವರು ತಮ್ಮ ವಚನದಲ್ಲಿ ವರ್ಣಿಸಿ ಅಂಗದ ಮೇಲೆ ಇಷ್ಟಲಿಂಗವನ್ನು ಧರಿಸುವ ಪದ್ಧತಿಯನ್ನು ಜಾರಿಗೆ ತಂದರು. ಇಷ್ಟಲಿಂಗವು ಜಾತಿಯ ಕುರುಹು ಅಲ್ಲ, ಅರಿವು, ಆಚಾರ ಮತ್ತು ಅನುಭಾವಗಳ ಸಂಗಮವಾಗಿದೆ. ಇಷ್ಟಲಿಂಗವು ವರ್ಣ, ವರ್ಗ, ವಯ ಮತ್ತು ಲಿಂಗಭೇದರಹಿತವಾಗಿದ್ದು, ಸಂಸ್ಕಾರವನ್ನು ಪಡೆದು ಯಾರು ಬೇಕಾದರೂ ಲಿಂಗವನ್ನು ಧರಿಸಬಹುದು, ಯಾವ ವೇಳೆಯಲ್ಲಾದರೂ ಪೂಜಿಸಬಹುದು.

ತಂದೆ ತಾಯಿಗಳು ಮಕ್ಕಳನ್ನು ಪ್ರೇರೇಪಿಸಿ ಇಷ್ಟಲಿಂಗದ ಮಹತ್ವವನ್ನು ತಿಳಿಸಬೇಕು. ಇಷ್ಟಲಿಂಗ ಪೂಜೆ ಮತ್ತು ವಚನಾಮೃತದ ಬಗೆಗೆ ಪರದೇಶಗಳಲ್ಲಿ ಕೂಡಾ ಒಲವು ಹೆಚ್ಚಾಗುತ್ತಿದೆ. ಅನೇಕ ವಿದೇಶಿಯರು ಇಷ್ಟಲಿಂಗವನ್ನು ಧರಿಸಿ ಮಾನಸಿಕ ಶಾಂತಿಯನ್ನು ಹೊಂದುವುದರಲ್ಲಿ ಯಶಸ್ವಿಯಾಗಿದ್ದಾರೆ.

–ಸ್ನೇಹಾ ಸಾಲಿಮಠ, ನ್ಯೂಜಿಲೆಂಡ್





## ರಾಷ್ಟ್ರಕವಿ ಕುವೆಂಪು



ಎದ್ದು ಬಂದವನವನು ಎತ್ತಿ ತಂದವನೇನು ?
ಗದ್ಯಪದ್ಯಕೆ ಹೃದ್ಯರಸಭಾವವಿತ್ತವನು.
ಅಕ್ಷರವ ಪೋಣಿಸುತೆ ಅಕ್ಷರವ ರಚಿಸಿದನು
ಅಕ್ಷರಾಕೃತಿಯ ಸಾಕ್ಷಾತ್ಕರಿಸಿಕೊಂಡವನು.
ಕಾವ್ಯಕ್ಕೆ ನವಜೀವ ಚೈತನ್ಯತಂದವನು.
ನವ್ಯಕ್ಕೆ ಭವ್ಯತೆಯದಿವ್ಯತೆಯ ತುಂಬಿದನು.
ಸಾಮಾನ್ಯರೆದೆಯ ಭೂಮವಕಂಡ ಧೀಮಂತ
ಪ್ರಾಮಾಣಿಕನುಭೂತಿ ಪ್ರೀತಿಯಲಿ ಶ್ರೀಮಂತ
ರಸಿಕನೂ ರಸಋಷಿಯು ಆದ್ಯಾತ್ಮಿವೇದಾಂತಿ;
ಹೊಸರೂಪಕಪುರೂಪ ದಾರಿ ಮಾಡಿದ ದಂತಿ
ದಿಟ್ಟಿಸಿದ ರೀತಿಯಲಿ ಕಂಡುಕೊಂಡರು ಅವನ,
ದಿಟ್ಟನೂ ದಿಟನು ಮೇಟಿಯ ಕಂಭದಂತವನ
ರಾಮಾಯಣಾರಣ್ಯರಾಮನಾರಾಮದ
ಸೀಮೆಗಾಡಿಸಿ ಕಣ್‌ಕಂಡ ಕಾಣದುದ
ಕುಂಭಿಣಿಯ ಕುವರಿಯವ ಗುಂಠನದ ಜರತಾರಿ
ಶಂಭೂಕ ಶಬರಿಯೂ ಮಿರ್ಳೆಯು ಮಂಡೋದರಿ;
ಹನುಮಸುಗ್ರೀವ ಭರತನ ವಿಭೀಷಣ
ಘನತೆ ತೋರಲ್ಕಂಡ ನವ ದಿವ್ಯದರ್ಶನ
ಲಂಕೇಶವಾಲಿಯಂ ರಾಜತಂತ್ರವನುಡಿಸಿ
ಶಂಕೆಯಳಿಸುತೆ ಗುಪ್ತ ಮುಕ್ತಿ ಗ್ರಂಥಿಯ ಬಿಡಿಸಿ
ಬರೆದ ಪ್ರತಿಸಾಲಿನಲಿ ಮನುಜಧರ್ಮವ ಭಿತ್ತಿ
ಎರೆದುನವರಸ ಸೋನೆ ಪೊರೆದ ಬೆಳೆಯನ್ನೆತ್ತಿ;
ಸಪ್ತಸಾಗರದಾಚೆ ಚಾಚಿದ ಕೈಯ್ಯಂ
ಸುಪ್ತಸಾಗರದಲ್ಲಿ ತೇಲಿಸಿದ ಮೈಯ್ಯಂ
ನಿರಂಕುಶಕುಶಾಗ್ರಮತಿ ಅವನು ಅನಿಕೇತನ
ಹರಡಿ ಏರಿತು ಬಾನ್ಗೆ ಕೀರುತಿಯ ಕೇತನ
ಕರ್ತೃ ರಾಮಾಯಣದ ಮಾಕವಿ ರಾಷ್ಟ್ರಕವಿ;
ಸಾರ್ಥಕ್ಯ ಸಾಹಿತ್ಯ ಶಿಖರಕೇರಿದ ರವಿ
ತಿಣುಕಲಿಲ್ಲವು ಫಣಿಯು ಈ ಕವಿಯ ಪೊತ್ತು;
ಇಣುಕಿಮಣಿ ಬೆಳಕಿನಲಿ ಕಂಡ ಮಣಿ ಮುತ್ತು
ಚಂದದಾಛಂದಸರಿಕಂಡು ಬೆರಗಾದೆ.
ನಂದದಾಕಾವ್ಯ ಜ್ಯೋತಿಗೆ ಬಾಗಿ ಮಣಿದ
(ಹಾಲುಹಳ್ಳ ಹರಿಯಲಿ ಬೆಣ್ಣೆ ಬೆಟ್ಟವಾಗಲೆಂದು)
ಪೇಳಿ ಚರಮಗೀತೆಯಂ ನಾಡ ಹರಸಿದ
ಹಾಲುಹಳ್ಳಬೆಣ್ಣೆಬೆಟ್ಟಕಾಣಲೆಳಸಿದ

ಕವಿಜನ್ಮ ಭೂಮಿಯಲಿ,
ಅವಿರಳಾರಣ್ಯದಲಿ ;
ಮಲೆಬನದ ಸೊಂಪು,
ನಲ್ನುಡಿಯ ಪೆಂಪು,
ಖಗಮೃಗದ ಧ್ವನಿಯಿಂಪು,
ಬಗೆಬಗೆಯ ಹೂಗಂಪು,
ದಿವ್ಯತುಂಗೆಯ ತಂಪು,
ಇವೆಲ್ಲಾ ಕುವೆಂಪು

ಮಹಾಕವಿಗೆ ನಮನ,
ಮಹಾಕಾವ್ಯಕೂ ನಮನ
ಸಹೃದಯಕೂ ನಮನ
ಸಹ್ಯಾದ್ರಿಗೂ ನಮನ.

–ಸಿ.ಎಂ. ಚನ್ನಬಸವಯ್ಯ
ಚಿತ್ರದುರ್ಗ

# ಸಮಾಜವನ್ನು ಶುದ್ಧೀಕರಿಸಿದ ಬಸವಣ್ಣ

–ಡಾ॥ ಆರ್.ಬಿ. ಚಿಲಮಿ, ಪ್ರಾಧ್ಯಾಪಕರು, ಶ್ರೀ ವೃಷಭೇಂದ್ರ ಪದವಿ ಮಹಾವಿದ್ಯಾಲಯ, ಹಾರೂಗೇರಿ–೫೯೧೨೨೦.

ವಿಶ್ವವಿಶಾಲದಲ್ಲಿ ಅನೇಕ ಧರ್ಮ ದ್ರಷ್ಟಾರರು, ಮಹಾತ್ಮರು ಆಗಿ ಹೋಗಿದ್ದಾರೇನೋ ನಿಜ; ಆದರೆ ಬಸವಣ್ಣನವರ ವ್ಯಕ್ತಿತ್ವ ಜಗಜ್ಜ್ಯೋತಿಯಾದುದು; ಜಗದ್ವಂದ್ವವಾದುದು. ಯಾಕೆಂದರೆ ಅವರು ವ್ಯಷ್ಟಿಗಿಂತ–ಸಮಷ್ಟಿ ಪ್ರಜ್ಞೆಗೆ ಸಮಷ್ಟಿ ಕಲ್ಯಾಣಕ್ಕೆ ಮಹತ್ವ ಕೊಟ್ಟಿರುವುದರಿಂದ, ಒಬ್ಬ ವ್ಯಕ್ತಿ ಸ್ವಾರ್ಥ–ತ್ಯಾಗ ಮಾಡಿ ಸಮಷ್ಟಿಯ ಹಿತಕ್ಕಾಗಿ ಹೋರಾಟ ಮಾಡಿ ಸರ್ವರಿಗೂ ಸಮಬಾಳು ಹಾಗೂ ಸಮಾನತೆಯ ತಳಪಾಯ ಹಾಕಿದರು. 'ಇವನಾರವ ಇವನಾರವ ಎಂದೆನ್ನದೆ' ಇವನಮ್ಮವ ಇವನಮ್ಮವ' ಎಂಬ ಬೀಜಮಂತ್ರದ ಮಹಿಮೆಯನ್ನು ತೋರ್ಪಡಿಸಿದರು. ಸಕಲರಿಗೂ ಲೇಸಾಗುವಂತೆ ಎಲ್ಲರಲ್ಲೂ ಸಲ್ಲುವಂತೆ ಬದುಕಬೇಕೆಂದು ನುಡಿದರು. ಅದರಂತೆ ನಡೆದವರು. ಅವರದೊಂದು ವಚನದಲ್ಲಿ ಹೇಳಿದ್ದುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು–

'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ  
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ  
ಇಲ್ಲಿ ಸಲ್ಲದವರು ಅಲ್ಲಿ ಸಲ್ಲರಯ್ಯಾ,  
ಕೂಡಲಸಂಗಮದೇವಾ'.

ಬಸವಣ್ಣನವರು ಹೇಳಿರುವಂತೆ ಸಲ್ಲುವಂತೆ ಬದುಕುವಲ್ಲಿಯೇ ಮಾನವನ ಬದುಕಿಗೊಂದು ಅರ್ಥವಿದೆ. ಮನುಷ್ಯನ ಬದುಕಿಗೆ ಬೆಲೆ ಅರ್ಥ ಬರಬೇಕಾದರೆ – ಎಲ್ಲರಿಗೂ ಸಲ್ಲುವಂತೆ ಬದುಕಬೇಕಾಗುತ್ತದೆ. ಅಂದರೆ ಸಮಾಜದ ಒಂದಂಗವಾದ ಮಾನವ ಸಮಾಜಕ್ಕೆ ಸ್ಪಂದಿಸಿ ಬದುಕು ಸಾಗಿಸಬೇಕಾಗುತ್ತದೆ. ಸಮಾಜದ ಒಂದು ಘಟಕವಾದ ಮನುಷ್ಯ ಸಮಾಜಕ್ಕೆ ನಮಾಜ ಮಾಡಬೇಕಾಗುತ್ತದೆ. ಉತ್ತಮರೊಡನಾಟವನ್ನು ಮಾಡಬೇಕಾಗುತ್ತದೆ. ಆದರೆ. ಪ್ರತಿಯೊಬ್ಬರಿಗೆ ತಾವು ನಡೆದದ್ದೆಲ್ಲ ಚೆನ್ನ, ನುಡಿದದ್ದೆಲ್ಲ ತಮಗೆ ಚೆನ್ನವೆಂದೆನಿಸುತ್ತದೆ. ತಮ್ಮ ನಡವಳಿಕೆಗೆ–ತಾವೇ ಮುದ್ರಿಕೆ ಹಾಕಿದರೆ ಸಾಲದು. ತಪ್ಪು ಒಪ್ಪುಗಳನ್ನು ತೂಗಿ ನೋಡುವ ಒಂದು ತಕ್ಕ ವ್ಯವಸ್ಥೆ ಇಲ್ಲಿದೆ; ಅದುವೇ ಕರ್ತಾರನ ಕಮ್ಮಟ. ಈ ಲೋಕವೇ ಈ ಸಮಾಜವೇ ಕಮ್ಮಟ. ಈ ಕಮ್ಮಟ ಮುದ್ರೆಯೊತ್ತಬೇಕು. ಸಲ್ಲುವಂಥಹುದೆಂದು, ಸಲ್ಲುವವರೆಂದು, ಆ ಮೇಲೆ ಆ ನಡವಳಿಕೆಗೊಂದು ಚಲಾವಣೆ ಮತ್ತು ಆ ನಡೆವಳಿಕೆಗೊಂದು ಬೆಲೆ ಬಂದೀತು.

ಸಮಾಜವೆಂಬುದು ಲೋಕ ಕಮ್ಮಟದ ಒಂದು ಶಾಖೆ ಎನ್ನಬಹುದು. ಮನುಷ್ಯ ಸಮಾಜವನ್ನು ಬಿಡಬಹುದು. ಆದರೆ ಸಮಾಜ ಮನುಷ್ಯನನ್ನು ಬಿಡಲಾರದು. ಅದಕ್ಕಾಗಿ ಹೇಳುವುದು ಮನುಷ್ಯ ಸಮಾಜ ಜೀವಿ ಇಲ್ಲವೇ ಸಂಘ ಜೀವಿ ಎಂದು. ಈ ಮೇಲೆ ಹೇಳಿದಂತೆ ಸಮಾಜವೆಂದರೆ ವ್ಯಕ್ತಿಗಳನ್ನು ಬಿಟ್ಟು ಬೇರೆಯಲ್ಲ. ವ್ಯಕ್ತಿ ವ್ಯಕ್ತಿಗಳು ಕೂಡಿ ವ್ಯಕ್ತಿಗಳ ಹಿತಾರ್ಥಕ್ಕಾಗಿ ಕಟ್ಟಿಕೊಂಡ ಒಂದು ಸಂಘ ಶಕ್ತಿ. ವ್ಯಕ್ತಿ ಅಥವಾ ವ್ಯಕ್ತಿಗಳು ಕಷ್ಟದಲ್ಲಿದ್ದಾಗ ಸಮಾಜ ಅವರ ಸಹಾಯಕ್ಕೆ ನಿಲ್ಲಬಹುದು. ಒಮ್ಮೊಮ್ಮೆ ಜನರಿಗೆ ಸಮಾಜದಿಂದ ತೊಂದರೆಯಾಗಲೂ ಬಹುದು. ಕಾಣಿಯ ಸೋಲ ಅರ್ಥಗಾಣಿಯ ಗೆಲ್ಲ' ಎನ್ನುವಂಥ ಸಮಾಜವನ್ನು ಹುಟ್ಟು ಹಾಕುವುದು ಅಗತ್ಯವಾಗಿದೆ. ಸತ್ಯವನ್ನು ಸತ್ಯವೆಂದೂ, ಹುಸಿಯನ್ನು ಹುಸಿಯೆಂದೂ ಸಾರುವ ನ್ಯಾಯಾಧೀಶನ ಪಾತ್ರವನ್ನು ಸಮಾಜ ವಹಿಸಬೇಕಾಗುತ್ತದೆ. ಅಂದಾಗ ಸಮಾಜಿಕರಿಗೆ ಸರಿಯಾದ ನ್ಯಾಯ ದೊರೆಯುತ್ತದೆ. ಇದು ಸುಸಂಸ್ಕೃತ –ಶುದ್ಧ ಸಮಾಜದಿಂದ ಮಾತ್ರ ಸಾಧ್ಯವಾಗುತ್ತದೆ. ಸುಸಂಸ್ಕೃತ ಸಮಾಜ ಕಟ್ಟುವಲ್ಲಿ ಅದೆಷ್ಟು ಶ್ರಮ ಪಟ್ಟಿರಬೇಕೆಂಬುದು ನನ್ನ ತರ್ಕ. ಸುಸಂಸ್ಕೃತ ಜನರಿಂದ ಸುಸಂಸ್ಕೃತ ಸಮಾಜ; ಸುಸಂಸ್ಕೃತ ಸಮಾಜದಿಂದ ಸುಸಂಕೃತ ಜನ. ಈ ಎರಡೂ ಇಲ್ಲ ಎಂದ ಮೇಲೆ ವ್ಯಷ್ಟಿ, ಸಮಷ್ಟಿಯ ಬದುಕಿಗೆ ಸ್ವಾಸ್ಥವಿಲ್ಲ. ಆದರೆ ಕೈ ಮೇಲಾದವರು, ಬುದ್ಧಿ ಮೇಲಾದವರು, ಜ್ಞಾನ ಮೇಲಾದವರು ತಮ್ಮಲ್ಲಿರುವುದನ್ನು ಸಕಲರ ಹಿತಾರ್ಥಕ್ಕಾಗಿ ಉಪಯೋಗಿಸುವುದರ ಬದಲು ತಮ್ಮನ್ನು ಇನ್ನಿಷ್ಟು ಬಲಪಡಿಸಿಕೊಳ್ಳುವುದಕ್ಕಾಗಿ ಉಪಯೋಗಿಸಿಕೊಳ್ಳುವುದುಂಟು. ಇಡೀ ಸಮಾಜಿಕರ ಮೇಲೆ ಅಥವಾ ಸಕಲ ಜನರ ಮೇಲೆ ತಮ್ಮ ನಿರಂಕುಶ ಅಧಿಕಾರ ನಿರಾತಂಕವಾಗಿ ನಡೆಯುತ್ತಿರಬೇಕು. ಇದು ಮೇಲಾದವರು ಇರಿಸಿಕೊಂಡಂತಹ ಪ್ರತಿಷ್ಠೆ, ತಮ್ಮ ಪ್ರತಿಷ್ಠೆಗೆ ಒಳಗಾಗಿ, ತಮ್ಮ ಸುತ್ತ ಪ್ರದಕ್ಷಿಣೆ ಹಾಕುವವರನ್ನು, ತಮ್ಮ ತೇಜೋವಲಯದಲ್ಲಿ ಇರಿಸಿಕೊಳ್ಳಲು ಬಯಸುತ್ತಾರೆ. ಇಂಥ ವಾತಾವರಣ ಬಸವಣ್ಣನವರ ಕಾಲದಲ್ಲಿ ಭಯಂಕರವಾಗಿತ್ತು. ಇದನ್ನು ಕಣ್ಣಾರೆ ಕಂಡ ಬಸವಣ್ಣ ಪ್ರತಿಭಟಿಸುವ, ಆಂದೋಲನ ಮಾಡಿಯಾದರೂ ಸಮಾಜವನ್ನು ಬದಲಾವಣೆ ಮಾಡಬೇಕು, ತಿದ್ದಬೇಕು,





ವರ್ಗ, ವರ್ಣ, ಜಾತಿ–ವಿಜಾತಿಯ ಭೇದ ಭಾವನೆ ತೊಲಗುವಂತಾಗಬೇಕೆಂದು ಚಿಂತಿಸಿದರು. ಬಸವಣ್ಣನವರು ತಮ್ಮದೊಂದು ವಚನದಲ್ಲಿ ಹೀಗೆಂದಿರುವರು–

*ವಿಪ್ರ ಮೊದಲು ಅಂತ್ಯಜ ಕಡೆಯಾಗಿ*  
*ಶಿವಭಕ್ತರಾದವರನೆಲ್ಲರನೊಂದೆ ಎಂಬೆ ;*  
*ಹಾರುವ ಮೊದಲು ಸ್ವಪಚ ಕಡೆಯಾಗಿ*  
*ಭವಿಯಾದವರನೆಲ್ಲರನೊಂದೆ ಎಂಬೆ*

ಅಂದರೆ ಬಸವಣ್ಣನವರು ಮನುಷ್ಯರಲ್ಲಿ ಜಾತಿಯಲ್ಲಿ ಎರಡು ವರ್ಗ ಮಾಡುತ್ತಾನೆ. ಒಂದು ಭಕ್ತವರ್ಗ, ಇನ್ನೊಂದು ಭವಿ ವರ್ಗ. ಈ ವರ್ಗೀಕರಣ ಗುಣ ಸಂಸ್ಕೃತಿಯ ಮೇಲಲ್ಲದೆ ಜಾತಿಯ ಮೇಲಲ್ಲ. ಹಾರುವವರಿಂದ ಹಿಡಿದು ಹರಿಜನರವರೆಗೆ ಭಕ್ತರಾದವರೆಲ್ಲರೂ ಸುಸಂಸ್ಕೃತರು; ಭಕ್ತರಲ್ಲದವರು ಭವಿಗಳು. ಸಂಸ್ಕೃತಿ ಹೀನರು. ಭಕ್ತ–ಭವಿ ಕುರಿತು ಸಂಕುಚಿತ ಅರ್ಥ ಮಾಡಿದಲ್ಲಿ ಬಸವಣ್ಣನ ಬಗೆಗೆ ಅಪಾರ್ಥ ಕಲ್ಪಿಸಿದಂತಾಗುತ್ತದೆ. ಅಂದಿನ ಸನ್ನಿವೇಶಕ್ಕೆ ಅನುಗುಣವಾಗಿ ಧಾರ್ಮಿಕ ಕ್ಷೇತ್ರದಲ್ಲಿ ಅಂಕುರಿಸಿದ ಈ ಆಂದೋಲನ, ಸಾಮಾಜಿಕ ಕ್ಷೇತ್ರವನ್ನೂ ಆವರಿಸಲು ಕಾರಣವಾಯಿತು. ಅದರ ನೇತೃತ್ವ ವಹಿಸಿದವರು ಬಸವಣ್ಣನವರು. ಮೂಲತಃ ಭಾರತೀಯರದು ಆತ್ಮ ಪರಮಾತ್ಮನಾಗಬೇಕೆಂಬ ವ್ಯಕ್ತಿ ಕೇಂದ್ರಿತ ಸಿದ್ಧಾಂತ. ಶರಣರು ಇದನ್ನು ಸಮಾಜ ಕೇಂದ್ರಿತ ಸಿದ್ಧಾಂತಕ್ಕೆ ವಿಸ್ತರಿಸಿದರು. ಹೀಗಾಗಿ ವ್ಯಕ್ತಿ ಕಲ್ಯಾಣದ ಜೊತೆ ಸಮಾಜ ಕಲ್ಯಾಣವೂ ಈ ಚಳುವಳಿಯ ಮುಖ್ಯ ಲಕ್ಷಣವೆನಿಸಿತು. ಅವರು ರಚಿಸಿದ ಸಾಹಿತ್ಯ ಸಾಹಿತ್ಯಕ್ಕಾಗಿ ಅಲ್ಲ, ವ್ಯಕ್ತಿ ಪರಿವರ್ತನೆಗಾಗಿ– ಸಮಾಜದ ಪರಿವರ್ತನೆಗಾಗಿಯೆಂಬ ಸಿದ್ಧಾಂತವಿಲ್ಲಿ ಅರ್ಥ ಪಡೆಯಿತು.

12ನೆಯ ಶತಮಾನದ ಹೊತ್ತಿಗೆ, ಶೂದ್ರ ಜೀವ ದೇವನಾಗಲಾರನೆಂಬ ಸಿದ್ಧಾಂತ ಸ್ಥಾಪಿತವಾಗಿದ್ದಿತು. ಸಮಾಜದಲ್ಲಿ ಪುರುಷ–ಸ್ತ್ರೀ, ಪ್ರಭು–ಪ್ರಜೆ, ಬ್ರಾಹ್ಮಣ–ಶೂದ್ರರಲ್ಲಿ ಸಮಾನತೆ ಸಾಧ್ಯವಿಲ್ಲವೆಂಬ ಭೇದ ಸಂಸ್ಕೃತಿಯೂ ನಿರ್ಮಾಣವಾಗಿದ್ದಿತು. ಈಗ ಶೂದ್ರನಿಗೂ ದೇವನಾಗುವ ಅರ್ಹತೆಯಿದೆ. 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಕಾಲವೊಂದಿತ್ತು. ಅಂಥ ಸಂದರ್ಭದಲ್ಲಿ ಸ್ತ್ರೀಗೆ ಪುರುಷನಷ್ಟು ಪ್ರಜೆಗೆ–ಪ್ರಭುವಿನಷ್ಟು–ಶೂದ್ರನಿಗೆ–ಬ್ರಾಹ್ಮಣನಷ್ಟು ಅಧಿಕಾರವಿದೆಯೆಂದು ವಾದಿಸಿದರು. ಇದರ ಫಲವಾಗಿ ಬಸವಣ್ಣನವರ ಹೋರಾಟದ ಬಲದಿಮ್ದ ಹೊಸ ಸಮಾಜವೊಂದು ಸೃಷ್ಟಿಯಾಯಿತು. ಇದರಿಂದಾಗಿ ಎಲ್ಲರೂ ಸ್ವತಂತ್ರರು. ಎಲ್ಲರೂ ಸಮಾನರು. ಎಲ್ಲರೂ ಸಹೋದರರೆಂಬ ತತ್ತ್ವ ಅನುಷ್ಠಾನಕ್ಕೆ ಬಂದಿತು. ಇದರ ಮುಂದುವರಿಕೆಯೆಂಬಂತೆ ಎಲ್ಲರೂ ದುಡಿಯಬೇಕೆಂಬ ಕಾಯಕ ಸಿದ್ಧಾಂತ, ಎಲ್ಲರೂ ಹಂಚಿಕೊಂಡು ಉಣ್ಣಬೇಕು ಎಂಬ ದಾಸೋಹ ತತ್ತ್ವಗಳು ಆಕಾರ ಪಡೆಯುವಂತಾದದ್ದು ಬಸವಣ್ಣನಿಂದಲೇ ಎಂಬುದಂತೂ ನಿತ್ಯ ಸತ್ಯವಾದುದು. ಹೊಸ ಸಮಾಜದ ಈ ಎಲ್ಲ ನೆಲೆಗಳನ್ನು ಗುರಿಯುಟ್ಟಿ ಆಡಿದ ಬಸವಾದಿ ಪ್ರಮಥರ ಮಾತುಗಳು ವಚನವೆಂಬ ಸಾಹಿತ್ಯ ಪ್ರಕಾರದಲ್ಲಿ ಒಡಮೂಡಿತು. ವರ್ಗಭೇದ, ಲಿಂಗಭೇದ, ವರ್ಣಭೇದವೆನ್ನದೆ ಎಲ್ಲ ವರ್ಗದವರ ಸಾವಿರ ಸಾವಿರ ವಚನಗಳು ಈ ಕಾಲದಲ್ಲಿ ಸೃಷ್ಟಿಯಾದವು. 12ನೆಯ ಶತಮಾನದಲ್ಲಿ ಬಸವಣ್ಣನಿಂದಾಗಿ ವ್ಯಕ್ತಿ ಸ್ವಾತಂತ್ರ್ಯವನ್ನು ಪಡೆದ ಜನವರ್ಗವು ವ್ಯಕ್ತಪಡಿಸಿದ ಅಭಿಪ್ರಾಯ ಸ್ವಾತಂತ್ರ್ಯದ ಫಲ ಈ ಸಾಹಿತ್ಯ. ಹೀಗಾಗಿ ಇಲ್ಲಿ ಆತ್ಮ ವಿಮರ್ಶೆಯಷ್ಟೇ ವಿಪುಲವಾಗಿ ಸಮಾಜ ವಿಮರ್ಶೆಯನ್ನೂ ಕಾಣಬಹುದಾಗಿದೆ. ಅದರಲ್ಲಿಯೂ ವರ್ಣಭೇದ ನಿರಾಕರಣೆ, ವರ್ಗಭೇದ ನಿರಾಕರಣೆ, ಲಿಂಗಭೇದ ನಿರಾಕರಣೆಗಳಂಥ ವಿಚಾರಗಳು ಸ್ಫೋಟಗೊಂಡುದು ಗಮನಿಸತಕ್ಕಂಥ ಸಂಗತಿಯಾಗಿದೆ. ಇಲ್ಲಿ ಪುರುಷರಷ್ಟೇ ಪ್ರಧಾನವಾಗಿ ಮಹಿಳೆಯರೂ, ಕುಲಜರಷ್ಟೇ ಪ್ರಧಾನವಾಗಿ ಅಂತ್ಯಜರೂ, ಪ್ರಭುಗಳಷ್ಟೇ ಪ್ರಧಾನವಾಗಿ ಪ್ರಜೆಗಳೂ ಬಾಳಿದುದು ಬರೆದುದು ಬಹುಶಃ ಜಗತ್ತಿನ ಇತಿಹಾಸದಲ್ಲಿಯೇ ಏಕೈಕ ಉದಾಹರಣೆಯಾಗಿದೆ. ಇಂಥ ವಿಚಾರಶೀಲರ ಅಂದರೆ ತತ್ತ್ವಸಾಹಿತ್ಯಗಳ ಉತ್ತರಾಧಿಕಾರಿಗಳಾದುದು ನಮ್ಮ ಭಾಗ್ಯ; ಇಂತಹ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದೂ, ಅಧ್ಯಯನ ಮಾಡುವುದೂ, ಅದರಂತೆ ನಡೆಯುವುದೂ ನಮ್ಮ ಕರ್ತವ್ಯ ವೆಂದು ಪ್ರತಿಯೊಬ್ಬ ಭಾರತೀಯ ಪ್ರಜೆ ಭಾವಿಸಿ ಆಚರಣೆ ಯಲ್ಲಿ ತರುವಂತಾಗಬೇಕು.

ವ್ಯಕ್ತಿತ್ವ ಶುದ್ಧಿಯಾದರೆ ಸಮಾಜವೂ ಶುದ್ಧವಾಗುತ್ತದೆ. ವ್ಯಕ್ತಿತ್ವದ ಒಳಪದರಿನಲ್ಲಿ ವಿಕಾರಗಳಿರುವಂತೆ ಸಭ್ಯತೆಯ ಸೋಗಿನಲ್ಲಿ ವಿಕೃತ ಆಚರಣೆಗಳು ನಿರ್ಮಾಣವಾಗಿರುತ್ತದೆ. ಇದರಿಂದಾಗಿ ಸಮಾಜ ಜೀವನವು ಅಶುದ್ಧವಾಗುತ್ತದೆ. ಭಾರತದಲ್ಲಿ ಇದರ ಶುದ್ಧೀಕರಣ ಕಡೆಗೆ ಬಹುಶಃ ಬೌದ್ಧ ಧರ್ಮವನ್ನು ಬಿಟ್ಟರೆ, ವೀರಶೈವೇತರ ಯಾವುದೇ ಧರ್ಮಗಳು ಮೊದಲಿನಿಂದಲೂ ಗಮನ ಕೊಡಲಿಲ್ಲ. ಏಕೆಂದರೆ

ನಮ್ಮ ದೇಶದಲ್ಲಿ ತತ್ತ್ವಚಿಂತನೆ ಪ್ರಾರಂಭವಾದುದು ಸಮಾಜದಲ್ಲಲ್ಲ; ಅಡವಿಯಲ್ಲಿ, ಆಶ್ರಮದಲ್ಲಿ. ಅಲ್ಲಿರುವ ಮುನಿಗಳಿಗೆ 'ವ್ಯಕ್ತಿಗತ' ಸಮಸ್ಯೆಗಳನ್ನು ಅಂದರೆ ತಮ್ಮೊಳಗಿನ ಮಾನಸಿಕ ವಿಕಾರಗಳನ್ನು ದೂರಗೊಳಿಸಿಕೊಳ್ಳುವುದೇ ಮುಖ್ಯವಾಗಿದ್ದಿತು. ಕಾಲಕ್ರಮದಲ್ಲಿ ಅರಣ್ಯ ಜೀವನಕ್ಕೆ ಬದಲು ಗ್ರಾಮ ಜೀವನ ಅಸ್ತಿತ್ವಕ್ಕೆ ಬಂದಿತು. ವ್ಯಕ್ತಿಗತ ಸಮಸ್ಯೆಗಳೊಂದಿಗೆ ಸಮಾಜಗತ ಸಮಸ್ಯೆಗಳು ಉದ್ಭವಿಸಿದರೂ, ಭಾರತದಲ್ಲಿ ಹಳೆಯ 'ವ್ಯಕ್ತಿ ಪರ ಚಿಂತನ' ಕ್ರಮವೇ ಮುನ್ನಡೆದು–'ಸಮಾಜಪರ ಚಿಂತನ' ಕ್ರಮ ಉಪೇಕ್ಷೆಗೊಳಗಾಯಿತು. ಹೆಚ್ಚಿನದಾಗಿ ಕಾಲಕಾಲಕ್ಕೆ ಸ್ಮೃತಿಕಾರರು ಹುಟ್ಟಿಬಂದು ಸಮಾಜದ ಬಗೆಗೆ ಭೇದ ನೀತಿಗಳನ್ನು ರೂಪಿಸಿ, ಅದನ್ನು ಹೋಳು ಹೋಳು ಮಾಡಿದರು. ಇದರಿಂದ ಭಾರತಿಯರು ವೈಯಕ್ತಿಕವಾಗಿ ಸಬಲರು, ಸಾಮಾಜಿಕವಾಗಿ ದುರ್ಬಲರು ಎಂಬ ಪರಿಸ್ಥಿತಿ ನಿರ್ಮಾಣವಾಯಿತು. ಇಂಥ ಸಂದರ್ಭದಲ್ಲಿ ಶರಣರು ಸಬಲ ಸಮಾಜಕ್ಕಾಗಿ ಬುದ್ಧನಿಗಿಂತ ಹೆಚ್ಚು ವೈಜ್ಞಾನಿಕವಾಗಿ ವಿಚಾರಿಸಿ, ವ್ಯಕ್ತಿ ಕಲ್ಯಾಣದೊಂದಿಗೆ ಸಮಾಜ ಕಲ್ಯಾಣ ಕ್ಕಾಗಿಯೇ ಶ್ರಮಿಸಿದರು. ಈ ಉಭಯ ಕಲ್ಯಾಣಗಳನ್ನು 'ಲಿಂಗವ್ಯಸನ ಜಂಗಮ ಪ್ರೇಮ'ವೆಂದು ಬಸವಣ್ಣನವರು ಕರೆದಿರುವರು. 'ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ'– ಎಂದೂ ಹೇಳಿ, ಜಂಗಮ ದಾಸೋಹಕ್ಕೆ ಅವರು ಮಾದರಿಯೆನಿಸಿದ್ದಾರೆ.

ಭಾರತೀಯ ಸಿದ್ಧಾಂತಗಳು ಪ್ರಾಣವನ್ನು ಲಿಂಗ ಮಾಡಿಕೊಳ್ಳುವ ಪ್ರಾಣಲಿಂಗಿ ಪಾತಳಿಗೆ ನಿಂತು ಬಿಟ್ಟರೆ, ವೀರಶೈವ ಸಿದ್ಧಾಂತ ಇನ್ನೂ ಮುಂದೆ ಹೋಗಿ ಸಮಾಜ ವನ್ನು ಲಿಂಗವಾಗಿಸುವ 'ಶರಣ' ಪಾತಳಿಯನ್ನು ಹೇಳುತ್ತದೆ. ಹಸನಾದ 'ವ್ಯಕ್ತಿ ಜೀವನದಷ್ಟೇ' ಮುಖ್ಯವಾದುದು. ಅವನ ಬೆಳವಣಿಗೆಗೆ ಬೇಕಾಗುವ ಹಸನಾದ 'ಸಮಾಜ ವ್ಯವಸ್ಥೆ' ಯೆಂಬುದು ಶರಣರ ವಿಚಾರವಾಗಿದೆ. ಇಲ್ಲದಿದ್ದರೆ ಸ್ನಾನ ಮಾಡಿ ಕೆಸರಿನಲ್ಲಿ ವ್ಯವಹರಿಸಿದಂತಾಗುತ್ತದೆ. ಮಾಡಿದ ಸ್ನಾನ ವ್ಯರ್ಥ ಹೀಗಾಗಿ ವ್ಯಕ್ತಿತ್ವದ ಶುದ್ಧೀಕರಣದಷ್ಟೇ ಸಮಾಜದ ಶುದ್ಧೀಕರಣವೂ ಮುಖ್ಯವೆಂದು ಶರಣರು ಹೇಳುತ್ತಾರೆ.

ಹೀಗೆ ಪ್ರಾಚೀನ ಭಾರತೀಯ ತತ್ತ್ವಸಿದ್ಧಾಂತಗಳು ವ್ಯಕ್ತಿ ಶುದ್ಧಿಯ ಬಗೆಗೆ ಒತ್ತು ಕೊಟ್ಟು ಸಮಾಜ ಶುದ್ಧಿಯನ್ನು ಉಪೇಕ್ಷಿಸಿದರೆ, ಆಧುನಿಕ ಸಿದ್ಧಾಂತಗಳು ಸಮಾಜ ಶುದ್ಧಿಯ ಕಡೆಗೆ ಒತ್ತು ಕೊಟ್ಟು ವ್ಯಕ್ತಿ ಶುದ್ಧಿಯನ್ನು ಉಪೇಕ್ಷಿಸುತ್ತವೆ. ಬಸವ ಸಿದ್ಧಾಂತ ಮಾತ್ರ ವ್ಯಕ್ತಿ ಶುದ್ಧಿಯಲ್ಲಿ ಬಿಚ್ಚಿಕೊಂಡು, ಸಮಾಜ ಶುದ್ಧಿಯಲ್ಲಿ ವಿಸ್ತಾರಗೊಳ್ಳುತ್ತದೆಯೆಂದು ನನ್ನ ವಿಚಾರ. ಸಮಾಜ ಶುದ್ಧವಾಗುವುದೆಂದರೆ ಸಮಾಜದಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಸಮಾನತೆಯನ್ನು ತರುವುದೇ ಆಗಿದೆ. ಈ ಮೊದಲು ಹೇಳಿದಂತೆ ಕಾಯಕ(ಶ್ರಮ) ಇನ್ನೊಂದು ದಾಸೋಹ (ವಿತರಣೆ) ಇವುಗಳಿಗೇ ಹೆಚ್ಚಿನ ಮಹತ್ವ ಕೊಟ್ಟವರಲ್ಲದೆ ಅವನ್ನು ಆಚರಣೆಯಲ್ಲಿ ತಂದ ಮಹಾನುಭಾವ. 'ಕಾಯಕ ಮಾಧ್ಯಮದಿಂದ ಗಳಿಸುವುದು–ದಾಸೋಹ–ಮಾಧ್ಯಮದಿಂದ ಬಳಸುವುದು' ಎಂಬ ಆದರ್ಶ ದಲ್ಲಿ ಕಲ್ಯಾಣರಾಜ್ಯ ಕಟ್ಟುವುದು ಮಂತ್ರಿ ಬಸವಣ್ಣನ ಧ್ಯೇಯ ವಾಗಿದ್ದಿತು. ಭಾರತೀಯ ಪರಂಪರೆಯಲ್ಲಿ ಧರ್ಮವೀರ, ದಯಾವೀರ, ಕರ್ಮವೀರನೆನಿಸುವ ಬಸವಣ್ಣ, ಅದನ್ನೂ ಮೀರಿದ ಮಹಾಪುರುಷನೆಂದು ಈ ಎಲ್ಲ ಚಿಂತನೆಗಳು ವ್ಯಕ್ತಪಡಿಸುತ್ತವೆ.

ಬದುಕಿನಲ್ಲಿ ಧರ್ಮವನ್ನು ಅಳವಡಿಸಿಕೊಳ್ಳದೆ ಮನುಷ್ಯ ನಲ್ಲಿ ಒಳ್ಳೆಯದೆಂಬ ಭಾವ ಹುಟ್ಟುವುದಿಲ್ಲ. ಸಂಸ್ಕೃತಿ ಬೆಳೆಯದೇ ಶಿಷ್ಟಾಚಾರ ಬೆಳೆಯುವುದಿಲ್ಲ. ಶಿಷ್ಟಾಚಾರ ಬೆಳೆಯದೆ ಶಿಷ್ಟ ಸಮಾಜ ನಿರ್ಮಾಣವಾಗುವುದಿಲ್ಲ. ಇಂಥ ಶಿಷ್ಟ ಸಮಾಜದೊಡನಾಟದಲ್ಲಿ ವ್ಯಕ್ತಿ ವ್ಯಕ್ತಿಯಲ್ಲಿ ಶ್ರೇಷ್ಠ ಪರಸ್ಪರ ಪ್ರೀತಿ ವಿಶ್ವಾಸ ಹುಟ್ಟುತ್ತದೆ. ಈ ಪ್ರೀತಿ ವಿಶ್ವಾಸದಲ್ಲಿ ಪರಮಾತ್ಮನಿರುತ್ತಾನೆ. ಅದರಿಂದಾಗಿ ಕೊರಡು ಕೊನರುತ್ತದೆ, ವಿಷ ಅಮೃತವಾಗುತ್ತದೆ. ದೂರಾದವರು ಹತ್ತಿರದವ ರಾಗುತ್ತಾರೆ. ದುರಾಚಾರಿಗಳು ಸದಾಚಾರಿಗಳಾಗುತ್ತಾರೆ. ಅಯ್ಯಾ ಎನ್ನುವಲ್ಲಿ, ಏನು ಬಂದಿರಿ ಹದುಳವಿದ್ದಿರಾ? ಎನ್ನುವಲ್ಲಿ ಒಂದು ಶಿಷ್ಟಾಚಾರ ಸಂಸ್ಕೃತಿ ಇದೆ. ಇದುವೇ ಸಮಾಜದ ಶುದ್ಧೀಕರಣದ ಅಭೀಪ್ಸೆಯಾಗಿದೆ. ಈ ರೀತಿ ಬಸವಣ್ಣನಿಗೆ ಶರಣರ ಬರವು ಪ್ರಾಣ ಜೀವಾಳವಾಗುತ್ತದೆ. ಸಮಾಜಿಕ ಸುಧಾರಣೆ–ಸಾಮಾಜಿಕ ಕ್ರಾಂತಿ ಉಳಿದ ದೇಶ ಗಳಲ್ಲಿ ನಡೆದ ಪರಿಯೇ ಬೇರೆ. ಬಸವ ಕಲ್ಯಾಣದಲ್ಲಿ ನಡೆದ ಪರಿಯೇ ಬೇರೆ. ಎತ್ತರದಲ್ಲಿ ನಿಂತು ಮಾರ್ಗದರ್ಶನ ಮಾಡುವ ಮಹಾಮುಖಂಡರ ರೀತಿ ಬಸವಣ್ಣದಲ್ಲ. ಹತ್ತಿರ ದಲ್ಲಿ ಕರೆದು, ಬಂದವರನ್ನು ಬರಮಾಡಿಕೊಂಡು, ಮನದಲ್ಲಿ ಕುಳ್ಳಿರಿಸಿಕೊಂಡು ಹೇಳುವ ಕೇಳುವ ಏಕೋ ಜೀವ ಬಸವಣ್ಣನದು! ಇಂಥ ಉದಾತ್ತ ಮಹಾಪುರುಷನನ್ನು ಪಡೆದ ನಮ್ಮ ನಾಡು–ಭರತಭೂಮಿ ಧನ್ಯವೋ ಧನ್ಯ !!.

*





## ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

–ಪ್ರೊ. ಡಿ. ಜವರೇಗೌಡ, ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

### ಕಾಯಕ ದಾಸೋಹಗಳು ಅನರ್ಘ್ಯ ಕೊಡುಗೆಗಳು :

ಭಗವದ್ಗೀತೆ ಉಪನಿಷತ್ತುಗಳ ಸಾರಮಂತ್ರಗಳಂತಿರುವ ಕಾಯಕ ದಾಸೋಹಗಳು ವಿಶ್ವಸಂಸ್ಕೃತಿ ಕಿರೀಟದಲ್ಲಿ ಸದಾ ರಾರಾಜಿಸುತ್ತಿರುವ ಅನರ್ಘ್ಯ ರತ್ನಗಳು. ಗೀತಾಚಾರ್ಯ ಮೊದಲುಗೊಂಡು ಸಮಾಜವಾದಿಗಳು ಸೇರಿದಂತೆ ಜಗತ್ತಿನ ನಾನಾ ಮಾನವತಾವಾದಿಗಳು ಕರ್ಮಯೋಗದ ಲಕ್ಷಣ ಗಳನ್ನು ಅದರ ಅವಶ್ಯಕತೆಯನ್ನು ಸೊಗಸಾಗಿ ಪ್ರತಿ ಪಾದಿಸಿದ್ದಾರೆ. ಸರ್ವಯೋಗಗಳನ್ನೊಳಗೊಂಡಂತೆ, ಗಟ್ಟಿ ಸಿದ್ಧಾಂತದ ನೆಲಗಟ್ಟಿನ ಮೇಲೆ ಪ್ರಯೋಗ ಯೋಗ್ಯವಾಗಿ ಶರಣರು ರೂಪಿಸಿರುವ ಕಾಯಕಯೋಗ ಅಭೂತಪೂರ್ವ ವಾದುದು. ಇದರಲ್ಲಿ ಭಕ್ತಿಯೋಗದ ತಲ್ಲೀನತೆಯಿದೆ, ಜ್ಞಾನ ಯೋಗದ ವೈಭವವಿದೆ, ರಾಜಯೋಗದ ಸಂಕಲ್ಪವಿದೆ. ಮಾನವನ ಆತ್ಮವಿಕಾಸ, ಸಮಾಜದ ಅಭ್ಯುದಯ, ನಾಡಿನ ಭದ್ರತೆ, ಲೋಕದ ಕಲ್ಯಾಣ– ಇವು ಕಾಯಕ ದಾಸೋಹ ಗಳಿಂದಲ್ಲದೆ, ಬೇರಾವ ಸಾಧನಗಳಿಂದಲೂ ಸಾಧ್ಯವಿಲ್ಲ. ಸಾಮಾನ್ಯ ಮಾನವ ದೇವಮಾನವನಾಗುವ, ದೇವಮಾನವ ಶಿವಸಾಯುಜ್ಯವನ್ನು ಪಡೆಯುವ ಸಾಧ್ಯತೆಗಳೆಲ್ಲ ಕಾಯಕ ಯೋಗದಲ್ಲಿ ಹುದುಗಿವೆ.

ಮಾನವನ ಸಕಲ ಸೌಭಾಗ್ಯ ದೌರ್ಭಾಗ್ಯಗಳಿಗೆ ಕ್ರಿಯೆಯೇ ಮೂಲ. ಒಬ್ಬಾನೊಬ್ಬ ವ್ಯಕ್ತಿಯ ಬಡತನಕ್ಕೆ, ದೇಶದ ದಾರಿದ್ರ್ಯಕ್ಕೆ ವ್ಯಷ್ಟಿ ಸಮಷ್ಟಿಗಳ ಸೋಮಾರಿತನ ಕಾರಣವೆ ಹೊರತು, ಭೌತಿಕಾನುಕೂಲಗಳ ಅಭಾವವಲ್ಲ. ಕ್ರಿಯಾನಿರತನಾದ ಮನುಷ್ಯನಿಗೆ ನಿಸರ್ಗವೇ ತನ್ನ ಸಂಪತ್ತನ್ನು ತೆರೆದು ತೋರಿಸುತ್ತದೆ; ಸೋಮಾರಿಗೆ ಕಣ್ಮುಂದಿನ ನಿಸರ್ಗ ಸಂಪತ್ತೂ ಮೃಗ ಜಲವಾಗಿ ಪರಿಣಮಿಸುತ್ತದೆ. ಕ್ರಿಯೆ ನಿಸರ್ಗ ಧರ್ಮ. ಮನುಷ್ಯ ಕುಳಿತಿದ್ದರೂ ನಿಷ್ಕ್ರಿಯನಲ್ಲ; ಕೈಕಾಲು ಹೊರತಾಗಿ ಅವನ ಉಳಿದ ಅಂಗಾಂಗಗಳು ಕಾರ್ಯಪ್ರವೃತ್ತ ವಾಗಿರುತ್ತವೆ. ಕೈಯ ಕರ್ತವ್ಯವೇ ಕೆಲಸ' ಕೈಯಿಂದಲೇ ಗೈಮೆ. ಕೈ ನಿಂತಾಗಲೆ ಕೆಲಸ ನಿಲ್ಲುತ್ತದೆ; ಕೆಲಸ ನಿಂತಾಗಲೆ ಉತ್ಪತ್ತಿ ಸ್ಥಗಿತಗೊಳ್ಳುತ್ತದೆ. ಕೈ ಚುರುಕಾದಾಗ, ಬುದ್ಧಿ ಮನಸ್ಸು ಮೊದಲುಗೊಂಡು ಅವನ ಸರ್ವೇಂದ್ರಿಯಗಳು ಸಹ ಚುರುಕಾಗುತ್ತವೆ.

ಕ್ರಿಯಾಮಥನವಿಲ್ಲದೆ ಕಾಣಬಂದುದೇ
ಇಕ್ಷುವಿನೊಳಗಣ ಮಧುರ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ
ತೈಲ ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ
ಕ್ಷೀರದೊಳಗಣ ಘೃತ ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ
ಕಾಷ್ಠದೊಳಗಣ ಅಗ್ನಿ?
ನಮ್ಮ ಗುಹೇಶ್ವರಲಿಂಗವ ತನ್ನೊಳಗಿರಿದೆನೆಂಬ
ಮಹಂತಂಗಲ್ಲದೆ ಸತ್ಕ್ರಿಯಾಚರಣೆಯೇ ಸಾಧನ
ಕಾಣ ಬೋ.

ಮನುಷ್ಯನ ಬದುಕಿಗೆ ಬೇಕಾದ ವಸ್ತುಗಳೆಲ್ಲ ಕ್ರಿಯೆಯ ಮೂಲಕವಾಗಿಯೇ ಒದಗಬೇಕು; ಅಷ್ಟೇ ಅಲ್ಲ, ಶಿವ ಸಾಕ್ಷಾತ್ಕಾರವೂ ಕ್ರಿಯೆಯಿಂದಲೇ ಆಗಬೇಕು. ಸತ್ಕ್ರಿಯಾ ಸಮ್ಯಗ್ಜ್ಞಾನಗಳು ಪರಸ್ಪರಾವಲಂಬಿಗಳೆಂದು ಷಣ್ಮುಖ ಸ್ವಾಮಿಗಳು ತಿಳಿಸುತ್ತಾರೆ. ಕ್ರಿಯೆಯಲ್ಲಿ ಪರಿಣಾಮಗೊಳ್ಳದ ಜ್ಞಾನವಾಗಲಿ, ಜ್ಞಾನದಲ್ಲಿ ಪರಿಣಾಮಗೊಳ್ಳದ ಕ್ರಿಯೆಯಾಗಲಿ ವ್ಯರ್ಥವೆಂಬುದು ಶರಣರ ಮತ, ಅದೇ ಅವರ ಶಿವಪಥ.

ಜ್ಞಾನದಲರಿದಡೇನಯ್ಯ ಕ್ರೀಯನಾಚರಿಸದನ್ನಕ್ಕ?
ನೆನೆದ ಮಾತ್ರದಲ್ಲಿ ಅಹುದೆ, ಕಾರ್ಯದಲ್ಲಲ್ಲದೆ?
ಕುರುಡ ಕಾಣ ಪಥವ, ಹೆಳವ ನಡೆಯಲರಿಯ.
ಒಂದಿಲ್ಲದಿರ್ದಡೊಂದಾಗದು.
ಜ್ಞಾನವಿಲ್ಲದಿರ್ದ ಕ್ರೀ ಜಡನು, ಕ್ರೀಯಿಲ್ಲದ ಜ್ಞಾನ
ವಾಗ್‌ಜಾಲ, ಭ್ರಾಂತು.
ಇದು ಕಾರಣ ಸಿದ್ಧ ಸೋಮನಾಥಲಿಂಗ ಕೂಡುವ
ಶರಣಂಗೆ ಎರಡೂ ಬೇಕು.

ಕ್ರೀವಿರಹಿತವಾದ್ದರಿಂದಲೇ ವೇದವೇದಾಂತಗಳ ದಿವ್ಯ ಸಂದೇಶ ವ್ಯರ್ಥವಾಯಿತೆಂಬುದು ಮೇಲಿನ ಮಾತು ಗಳಿಂದ ಬೋಧೆಯಾಗುತ್ತದೆ. ಕ್ರೀಗಿಳಿಯದೆ ಬಾಯಲ್ಲುಳಿದ ಅದ್ವೈತ ದರ್ಶನ ನಿಷ್ಫಲವಾಗಿ ಮೂಲೆ ಹಿಡಿದದ್ದೇ ಹೀಗೆ. ಅದೇನಾದರೂ ಕಾರ್ಯರೂಪಕ್ಕಿಳಿದಿದ್ದರೆ ಭರತಖಂಡದ ಪರಿಸ್ಥಿತಿಯೇ ಬೇರೆಯಾಗುತ್ತಿತ್ತು. ವೇದಾಂತದ

ಹಿರಿಮೆಯನ್ನು ಮನಗಂಡು, ಅದನ್ನು ಜನಪ್ರಿಯಗೊಳಿಸಲು ಸ್ವಾಮಿ ವಿವೇಕಾನಂದರು ನಡೆಸಿದ ಪ್ರಚಾರವೂ ಗೋರ್ಕಲ್ಲ ಮೇಲೆ ಕರೆದ ಮಳೆಯಾಯಿತು. ಮೂಲಶಿಕ್ಷಣ, ವೃತ್ತಿ ಶಿಕ್ಷಣ ಮೊದಲಾದವುಗಳ ಬಗ್ಗೆ ಬೊಬ್ಬೆ ಹಾಕುವ ಶಿಕ್ಷಣ ತಜ್ಞರ ಗಮನ ಶರಣರ ಸಂದೇಶದ ಕಡೆಗೆ ಹರಿಯ ದಿರುವುದು ಶೋಚನೀಯ ವಿಚಾರ. 'ಕ್ರಿಯೆಯನರಿದವಂಗೆ ಗುರುವಿಲ್ಲ, ಆಚಾರವನರಿದವಂಗೆ ಲಿಂಗವಿಲ್ಲ' ಎಂಬ ಅಂಬಿಗರ ಚೌಡಯ್ಯನ ಮಾತೊಂದೇ ಸಾಕು ಮಾನವನ ಉದ್ಧಾರಕ್ಕೆ.

ಕ್ರಿಯೆ ತನ್ನಷ್ಟಕ್ಕೆ ತಾನೇ ಪರ್ಯವಸಾನವಾಗುವುದಿಲ್ಲ. ಕ್ರಿಯೆಯಿಂದ ಜ್ಞಾನ, ಜ್ಞಾನದಿಂದ ಕ್ರಿಯೆ-ಇದರ ಸರಪಳಿ ಅನಂತವಾಗಿ ಸಾಗುತ್ತದೆ; ಆ ಜ್ಞಾನವೇ ನಿಜವಾದ ಅರಿವಿನಲ್ಲಿ ಪರಿಣಾಮಗೊಳ್ಳುತ್ತದೆ. ಇದನ್ನೇ ಪ್ರಭುದೇವರು ಹೀಗೆ ಸ್ಪಷ್ಟಪಡಿಸುತ್ತಾರೆ.

ಮಾಡುವ ಮಾಟದಿಂದಲ ಬೇರೊಂದಿನರಿಯಬೇಕು.
ಅರಿವಿಂಗೆ ನೆಮ್ಮುಗೆ ಒಡಗೂಡಬೇಕು.
ಅರಿವಿಂಗೆ ನೆಮ್ಮುಗೆ ಒಡಗೂಡಿದ ಬಳಿಕೆ ಬಯಲು
ಭ್ರಮೆಯ ಕಳೆದು
ನಮ್ಮ ಗೋಹೇಶ್ವರ ಲಿಂಗದಲ್ಲಿ ನಿಜಪದವನೆಯ್ದುವುದು
ಮಾರಯ್ಯ.

ಕ್ರಿಯೆಯ ಮಾಡುವಲ್ಲಿ ಅಹಂಕಾರವಿರಬಾರದು, ಅನ್ಯಭಾವ ಕೈದೆಯಿರಬಾರದು; ಅದಕ್ಕಂಟಿಯೂ ಅಂಟದಂತಿರಬೇಕು.

ಮಾಡುವಂತಿರಬೇಕು, ಮಾಡದಂತಿರಬೇಕು,
ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು,
ಕೂಡಲಸಂಗಮದೇವರ ನೆನೆವುತ್ತ ನೆನೆವುತ್ತ
ನೆನೆಯದಂತಿರಬೇಕು.

ಕರ್ಮ ಮಾಡಬೇಕು, ಕರ್ಮಫಲಕ್ಕಾಶಿಸಬಾರದೆಂಬ ಗೀತಾ ಸಂದೇಶಕ್ಕಿಂತ ಇದು ಹೆಚ್ಚು ಅರ್ಥಪೂರ್ಣವಾಗಿದೆ, ಧ್ವನಿ ಪೂರ್ಣವಾಗಿದೆ. ಮಾಡುವ ಮನುಷ್ಯ ಮಾಟದಲ್ಲಿ ಲೀನವಾಗಿರಬೇಕೇ ಹೊರತು, ಕಾಣಿಸಿಕೊಳ್ಳಬಾರದು. ಆಗ ಕ್ರಿಯೆ ಪೂರ್ಣವಾಗುತ್ತದೆ, ಸಾರ್ಥಕವಾಗುತ್ತದೆ; ಕ್ರಿಯೆಯ ಪರಿಪೂರ್ಣತೆಯೊಡನೆ ಕ್ರಿಯಾವಂತನೂ ಪೂರ್ಣನಾಗುತ್ತಾನೆ.

ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ.
ಜ್ಞಾನವೆಂದರೆ ತಿಳಿಯುವುದು; ಕ್ರಿಯೆಯೆಂದತೆ
ತಿಳಿದಂತೆ ಮಾಡುವುದು.

ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ
ಅದರಂತೆ ಆಚರಿಸುವುದೇ ಕ್ರಿಯೆ.
ಅಂತು ಆಚರಿಸದಿದ್ದರೆ ಅದೇ ಅಜ್ಞಾನ ನೋಡಾ
ಕೂಡಲಚೆನ್ನಸಂಗಮದೇವಾ

ಎಂಬುದಾಗಿ ಚೆನ್ನಬಸವಣ್ಣ ಈ ಎರಡು ತತ್ವಗಳ ಪರಸ್ಪರ ಸಂಬಂಧವನ್ನು ಸ್ಪಷ್ಟಪಡಿಸಿದ್ದಾನೆ. ಕ್ರಿಯೆಯಿಲ್ಲದ ಜ್ಞಾನ ಪ್ರಯೋಜನವಿಲ್ಲವೆಂದು ತೋಂಟದ ಸಿದ್ಧಲಿಂಗ ಗುರು ನಿರೂಪಿಸುತ್ತಾರೆ. 'ಕ್ರಿಯೆಯಿಲ್ಲದ ಜ್ಞಾನಕ್ಕೆ ಆಶ್ರಯವಿಲ್ಲ, ಜ್ಞಾನವಿಲ್ಲದ ಕ್ರಿಯೆಗೆ ಆಶ್ರಯವಿಲ್ಲ' ಎಂಬುದು ಅವರ ಅಭಿಮತ.

ಕಾಯಕವೆನ್ನುವುದು ಬರಿಯ ತತ್ವವಿಲ್ಲ, ಅದೊಂದು ಕಠಿನ ಶಿಸ್ತು, ಕಠೋರ ವ್ರತ; ಅದು ಬದುಕಿನ ಉಸಿರು, ನೆಲೆ; ಇಹಪರ ಸಾಧನ. ಶರಣರು ಈ ಸಿದ್ಧಾಂತವನ್ನು ಚರ್ಚೆ ಪ್ರಯೋಗಗಳ ಮೂಲಕ ಒರೆದು ಅರೆದು, ತಿದ್ದಿ ತೀಡಿ, ತೂರಿ ಕೇರಿ, ತೂಗಿ ತೀವಿ, ಸಾಂಗಗೊಳಿಸಿದ್ದಾರೆ; ಕಾಯಕವೇ ಕೈಲಾಸವೆನ್ನುವಷ್ಟರ ಮಟ್ಟಿಗೆ ಅದನ್ನು ಪೂರ್ಣ ಗೊಳಿಸಿದ್ದಾರೆ. ಕಾಯಕ ತಪ್ಪಿದರೆ ಸೈರಿಸಬಾರದೆಂದು ಕಾಳವ್ವೆ, ಕಾಯಕವ ಬಿಟ್ಟು ಹೊನ್ನ ಬೇಡಿದೆನೆಂಬುದು ಕಷ್ಟವನ್ನಲ್ಲವೆ ಎಂದು ಆಯ್ದಕ್ಕಿ ಮಾರಯ್ಯ, ಕಾಯಕವಳಿದ ಠಾವಿನಲ್ಲಿ ಜೀವನದ ಎಡೆಯುಂಟೆ ಎಂದು ಅವನ ಮಡದಿ ಲಕ್ಕಮ್ಮ ಮೊದಲಾದ ಶರಣಶರಣೆಯರು ಕಾಯಕದ ಮಹತ್ವವನ್ನು ಕೊಂಡಾಡುತ್ತಾರೆ. 'ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ, ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು' ಎಂಬ ಆಯ್ದಕ್ಕಿ ಲಕ್ಕಮ್ಮನ ಮಾತಿನಲ್ಲಿ ಅಪ್ಪಟ ಸತ್ಯವಿದೆ. 'ಹಾಗದ ಕಾಯಕವ ಮಾಡಿಕೊಂಡು, ಹಣವಡ್ಡ ತಾ ಎಂಬಲ್ಲಿ ಸತ್ಯಕಾಯಕವುಂಟೆ? ಎಂದು ಮಾರಯ್ಯ ಲಾಭಕೋರರನ್ನು ಹಂಗಿಸುತ್ತಾನೆ. ಹತ್ತು ರೂಪಾಯಿ ಬೆಲೆ ಬಾಳುವ ಬಟ್ಟೆಯನ್ನು ಇಪ್ಪತ್ತು ರೂಪಾಯಿಗೆ ಮಾರುವ ನೇಯ್ಗೆಯವರ ಕಾಯಕ ಸತ್ಯ ಶುದ್ಧ ಕಾಯಕವಲ್ಲವೆಂಬುದು ಮಾರಯ್ಯನಂಥ ಶರಣರ ನಿಲುವು. ಕಾಯಕ ವ್ಯಕ್ತಿ ವ್ಯಕ್ತಿಗಳ, ವ್ಯಷ್ಟಿ ಸಮಷ್ಟಿಗಳ ಸಂಬಂಧವನ್ನು ಹೊಂದಾಣಿಸುತ್ತದೆ. ಸತ್ಯ ಧರ್ಮಗಳನ್ನೊಳ ಗೊಂಡ ದುಡಿಮೆ ಪೂಜೆಗಳ ಸಮನ್ವಯವೇ ಕಾಯಕ. ಸುಜ್ಞಾನ ಸತ್ಕ್ರಿಯೆ ಸದ್ಭಕ್ತಿ ಸತ್ಸಂಕಲ್ಪಗಳ ಸಂಗಮವೇ ಕಾಯಕಯೋಗ. ಅದೇ ಶಿವಯೋಗವೆಂಬುದೇ ಶರಣರ ಅಮೂಲ್ಯ ಸಂದೇಶ.





ಜಗತ್ತಿನ ಸಕಲ ಧರ್ಮಗಳೂ ಕರ್ಮಸಿದ್ಧಾಂತವನ್ನು ಒಂದಲ್ಲ ಒಂದು ರೀತಿಯಲ್ಲಿ ಒಪ್ಪಿಕೊಂಡಿವೆ. ಇಸ್ಲಾಂ ಧರ್ಮದ ಓರ್ವ ಸಂತ ಜೋರ್ಡಾನ್ ನದಿಯ ತೀರದಲ್ಲಿ ಹೊಲದಲ್ಲಿ ಕೆಲಸ ಮಾಡುತ್ತಿದ್ದ; ನದಿಯಲ್ಲಿ ತೇಲಿ ಬಂದ ಹಣ್ಣನ್ನು ತಿಂದ; ಆ ಹಣ್ಣನ್ನು ತಿನ್ನಲು ತನಗೆ ಹಕ್ಕಿಲ್ಲವೆಂದು ಮರ ಹುಡುಕಿಕೊಂಡು ಹೊರಟ; ಅಲ್ಲೇ ಇದ್ದು ಆ ಮರಕ್ಕೆ ನಾಲ್ಕು ದಿನ ನೀರು ಹುಯ್ದು ಮರಳಿದ. ಕೆಲಸ ವಿಲ್ಲದವನು ತಿನ್ನಬಾರದೆಂದು, ಬೆವರಿನಿಂದ ನಿನ್ನ ರೊಟ್ಟಿ ಗಳಿಸಿಕೋ ಎಂದು ಬೈಬಲ್ ಸಾರುತ್ತದೆ. ಗಳಿಸದೆ ಉಣ್ಣುವವ ಕಳ್ಳನೆಂದು ರೂಸೊ ಹೇಳುತ್ತಾನೆ. 'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಶೇಚ್ಛತಂ ಸಮಾಃ'- ಇದು ಹಿಂದೂ ಧರ್ಮ ಕಲಿಸುವ ಪಾಠ. ಕಾಯಕವೇ ಪೂಜೆ; ಕಾಯಕವೇ ಜೀವನದ ಸರ್ವಸ್ವ; ಭಗವಂತ ಕರುಣಿಸಿರುವ ಶಕ್ತಿ ಸಾಮರ್ಥ್ಯಗಳನ್ನು ನ್ಯಾಯವಾಗಿ ಬಳಸಿಕೊಳ್ಳುವ ಸಾಧನವೇ ಕಾಯಕ. ದೇಹವನ್ನು ದೇವರಿಗೆ ಸಮರ್ಪಿಸಿಕೊಳ್ಳುವ ಅತ್ಯಂತ ಪರಿಣಾಮಕಾರಿ ವಿಧಾನವೇ ಅದು. ಕ್ರಿಯೆ ಧ್ಯಾನಗಳ, ಭೌತಿಕ ಪಾರಮಾರ್ಥಿಗಳ ಸಮನ್ವಯವೇ ಅದು. ಮಾನವ ಜೀವನದ ಸರ್ವಾಂಗೀಣ ವಿಕಾಸ ಕಾಯಕದಿಂದ ಮಾತ್ರ ಸಾಧ್ಯವೆಂದು ಗಾಂಧೀಜಿ ಸಾರುತ್ತಾರೆ. ಜಗತ್ತಿನ ಮಹಾಮನೀಷಿಗಳು ಕಾಯಕಕ್ಕೆ ಸಂಬಂಧಿಸಿದಂತೆ ರೂಪಿಸಿದ್ದ ವಿಚಾರಗಳೆಲ್ಲವೂ ಶರಣರ ವಚನಗಳಲ್ಲಿ ಅಡಕಗೊಂಡಿದೆಯೆಂಬುದು ಅಚ್ಚರಿಯ ಸಂಗತಿ.

ಕಾಯಕದಲ್ಲಿ ನಿರತನಾದಡೆ ಗುರುದರುಶನವಾದರೂ
ಮರೆಯಬೇಕು;
ಲಿಂಗಪೂಜೆಯಾದರೂ ಮರೆಯಬೇಕು;
ಜಂಗಮ ಮುಂದಿದ್ದರೂ ಹಂಗು ಹರಿಯಬೇಕು.
ಕಾಯಕವೇ ಕೈಲಾಸವಾದ ಕಾರಣ
ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು

ಗುರುಲಿಂಗ ಜಂಗಮಗಳಿಗೆ ವೀರಶೈವ ಧರ್ಮದಲ್ಲಿರುವ ಮಹತ್ವವನ್ನು ಗಣನೆಗೆ ತಂದುಕೊಂಡಾಗ, ಅವುಗಳಿಗಿಂತ ಕಾಯಕ ಮೇಲೆನ್ನುವ ಅಥವಾ ಅನಿವಾರ್ಯವೆನ್ನುವ ಈ ವಚನದ ಧ್ವನಿ ಗಮನಾರ್ಹವಾದದ್ದು. 'ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ; ಲಿಂಗವಾದರೂ ಕಾಯಕ ದಿಂದಲೇ ಶಿಲೆಯ ಕುಲ ಹರಿವುದು; ಜಂಗಮವಾದರೂ ಕಾಯಕದಿಂದಲೇ ವೇಷದ ಪಾಶ ಹರಿವುದು' ಎಂಬ ನುಲಿಯ ಚಂದಯ್ಯನ ವಚನಗಳನ್ನು ಪರಿಭಾವಿಸಿದಷ್ಟು ಕಾಯಕದ ಶ್ರೇಷ್ಠತೆ ಸ್ಫುಟವಾಗುತ್ತದೆ. ಕಾಯಕದಲ್ಲಿ ಮೇಲು ಕೀಳುಗಳಿಲ್ಲವೆಂಬುದಕ್ಕೆ ಹಲವು ಬಗೆಯ ಕಾಯಕಸ್ಥರು ಅಂದಿನ ಕಲ್ಯಾಣದಲ್ಲಿ ಒಟ್ಟುಗೂಡಿ, ಸ್ವಾತಂತ್ರ್ಯ ಸಮಾನತೆ ಭ್ರಾತೃತ್ವಗಳಿಂದ ಸಂಲಬ್ಧವಾಗಬಹುದಾದ ಸುಖಸಂತೋಷ ಗಳನ್ನನುಭವಿಸುತ್ತಿದ್ದುದೇ ಸಾಕ್ಷಿಯಾಗಿದೆ. ದೇವಸಹಿತ ಮನೆಗೆ ಬಂದ ಭಕ್ತನ ಕಾಯಕವಾವುದೆಂದು ಪ್ರಶ್ನಿಸ ಲಾಗದು. ಒಂದೇ ಕುಟುಂಬದ ಅಣ್ಣ ತಮ್ಮಂದಿರಲ್ಲೊಬ್ಬ 'ಕಾಸಿ ಕಮ್ಮಾರನಾದ', ಮತ್ತೊಬ್ಬ 'ಬೀಸಿ ಮಡಿವಾಳನಾದ', ಮತ್ತೊಬ್ಬ 'ಹಾಸನಿಕ್ಕಿ ಸಾಲಿಗನಾದ', ಬೇರೊಬ್ಬ 'ವೇದವನೋದಿ ಹಾರುವನಾದ'- ಹೀಗಿರುವಾಗ ಅವರಲ್ಲಿ ಭೇದ ಸಲ್ಲದೆಂಬುದು ಬಸವಣ್ಣನವರ ಆಗ್ರಹ. ಆ ಕಾಲದ ಎಲ್ಲ ಶರಣರ ಹೆಸರುಗಳ ಹಿಂದೆ ಸಾಮಾನ್ಯವಾಗಿ ಕಾಯಕ ಸೇರಿಕೊಂಡಿರುವುದನ್ನು ಅವುಗಳಿಗೆ ತುಂಬ ಬೆಲೆಯಿತ್ತೆಂಬು ದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಕಾಯಕದ ಜತೆಜತೆಗೆ ಬರುವ, ಸೂರ್ಯ ಭೂಮಿಗಳ, ಬಳ್ಳಿ ಹೂವುಗಳ, ನೀರು ನೈದಿಲೆಗಳ ಹೋಲುವ, ಅದ್ಭುತ ಸತ್ವವುಳ್ಳ ಮತ್ತೊಂದು ಪದ ದಾಸೋಹ. ಅದರ ನಿಷ್ಪತ್ತಿ ಏನೇ ಇರಲಿ, ಈಗ ಅದು ತ್ಯಾಗ ಅಪರಿಗ್ರಹ ಅಸಂಗ್ರಹ ಮೊದಲಾದ ಬದುಕಿನ ಅಮೂಲ್ಯ ಮೌಲ್ಯಗಳನ್ನು ಸಂಕೇತಿಸುತ್ತದೆ. ಇವೆರಡೂ ಬದುಕಿನ ಎರಡು ಶ್ವಾಸಕೋಶ ಗಳು; ಹಕ್ಕಿಯ ಎರಡು ರೆಕ್ಕೆಗಳು. ಎರಡೂ ಪರಸ್ಪರ ಪೂರಕಗಳು, ಜಗದ ತಾರಕಶಕ್ತಿಗಳು. ಈ ಎರಡು ಮೌಲ್ಯಗಳ ಅಖಂಡ ಸ್ವರೂಪದ ಒಟ್ಟು ಕಲ್ಪನೆ ಇಷ್ಟೊಂದು ವ್ಯಾಪಕವಾಗಿ ಸಾಂಕೇತಿಕವಾಗಿ ಬೇರೊಂದು ಧರ್ಮದಲ್ಲಿ ಅಷ್ಟೇ ಏಕೆ, ಜಗತ್ತಿನ ಅರ್ಥಶಾಸ್ತ್ರ ಗ್ರಂಥಗಳಲ್ಲಿ ನಾಡ ಕಂಡದ್ದಿಲ್ಲ. ದಾಸೋಹದಿಂದಲೇ ಕಾಯಕಕ್ಕೆ ಸಾರ್ಥಕತೆ. ಈ ಎರಡರಲ್ಲಿಯೂ ಸ್ವಾರ್ಥಕ್ಕಿಂತ ಪರಾರ್ಥಕ್ಕೆ ಹೆಚ್ಚು ಒತ್ತು. ಕಾಯಕದಿಂದ ಬಂದದ್ದರಲ್ಲಿ ಸರಳ ಜೀವನಕ್ಕೆಷ್ಟು ಅತ್ಯಗತ್ಯವೋ ಅಷ್ಟನ್ನುಳಿಸಿಕೊಂಡು, ಉಳಿದದ್ದನ್ನು ಸಮಷ್ಟಿ ಗರ್ಪಿಸಬೇಕಾದ್ದು ಪ್ರತಿಯೊಬ್ಬ ಮಾನವನ ಗುರಿ. ಜಗತ್ತಿನ ಇಂದಿನ ಆರ್ಥಿಕ ಹಾಗೂ ಸಾಮಾಜಿಕ ವ್ಯಾಧಿಗಳಿಗೆ ಹೊಟ್ಟೆ ಬಾಕತನ ಹಾಗೂ ಸಂಗ್ರಹಗಳೇ ಕಾರಣವೆಂಬು ದನ್ನು ಆಗಿನ ಕಾಲದ ಶರಣರು ಅರಿತಿದ್ದರು. ಒಬ್ಬನ ಸಂಗ್ರಹದ ಫಲವಾಗಿ ನೂರಾರು ಹೊಟ್ಟೆಗಳು ಹಸಿದಿರುತ್ತ ವೆಂಬುದು ಜಗತ್ತಿನ ಎಲ್ಲ ಕಡೆಯಲ್ಲಿಯೂ ಕಾಣುವ ದುರಂತವಾಗಿದೆ. 'ಇಂದಿಗೆಂತು ನಾಳಿಂಗೆಂತು ಎಂದು

ಬೆಂದ ಒಡಲ ಹೊರೆಯ ಹೋಯಿತೆನ್ನ ಸಂಸಾರ' ಎಂಬ ಕಕ್ಕುಲತೆ ಬಸವಣ್ಣನವರದು. ಈ ಸಂಗ್ರಹದಿಂದ ಸಂಗ್ರಹ ಕಾರರ ಆತ್ಮಾವನತಿ ನೈತಿಕ ಪತನ ಮಾತ್ರವಲ್ಲ, ಆರ್ಥಿಕ ಅಸಮತೋಲನ, ವರ್ಗಕಲಹ, ಅಶಾಂತಿ, ದರೋಡೆ ಮೊದಲಾದ ಪಿಡುಗುಗಳು ಜೀವನವನ್ನು ಪ್ರಕ್ಷುಬ್ಧಗೊಳಿಸು ತ್ತವೆಂಬ ಯಥಾರ್ಥಜ್ಞಾನ ಆ ಪ್ರವಾದಿಗೆ ಗೊತ್ತಿತ್ತು. ಆದ್ದರಿಂದಲೇ ಅವರು ತ್ರಿವಿಧ ದಾಸೋಹಕ್ಕೆ ಒತ್ತು ಕೊಡುತ್ತಾರೆ. 'ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು; ನಿಮ್ಮ ಸೊಮ್ಮಿಂಗೆ ಸಲಿಸುವೆನು' ಎನ್ನುತ್ತಾರೆ.

ದುಡಿಯದೆ, ಬೆವರು ಸುರಿಸದೆ, ಭಾವಶುದ್ಧಿಯಿಂದಲ್ಲದೆ ಗಳಿಸುವ ಹಣ ಅಥವಾ ಆಸ್ತಿ ತುಡುಗೆಂದು ಶರಣರ ವಾಣಿ ನುಡಿಯುತ್ತದೆ; ಅದು ದಾನಕ್ಕೂ ಸಲ್ಲ, ಪೂಜೆಗೂ ಸಲ್ಲ. 'ಪಾಪಿಯ ಧನ ಪ್ರಾಯಶ್ಚಿತ್ತಕಲ್ಲದೆ ಸತ್ಪಾತ್ರಕ್ಕೆ ಸಲ್ಲದು' ಎಂದು ಬಸವಣ್ಣ ಘೋಷಿಸುತ್ತಾರೆ. ಇಂದು ದೇವರ ಹುಂಡಿಗಳಲ್ಲಿ ಬೀಳುವ ಹೊನ್ನು ಹಣಗಳಾಗಲಿ, ದೇವರ ಧರ್ಮದ ಹೆಸರಿನಲ್ಲಿ ನಡೆಯುವ ಅನೇಕ ಕಾರ್ಯಗಳಾಗಲಿ ದುಡಿಮೆಯಿಂದ ಬಂದುವೆಂದು ಹೇಳುವಂತಿಲ್ಲ; ಅದೆಲ್ಲ ಕಪ್ಪುಹಣ ಅಥವಾ ಪಾಪದ ಹಣ. ಬೆವರಿನ ಮೂಲವಿಲ್ಲದ ಬಡ್ಡಿಯ ಹಣ ಸಹ ದೂಷ್ಯವೇ. 'ಹಡೆದೊಡವೆವಸ್ತುವನು ಮೃಢಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು' ಎಂಬ ವಚನದಲ್ಲಿ ಈ ಭಾವನೆ ಹುದುಗಿದೆ. 'ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತ ವಲ್ಲದೆ, ದುರಾಶೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯ ಶುದ್ಧ ಕಾಯಕದ ನಿತ್ಯದ್ರವ್ಯವಾದರೆ ಚಂದ್ರೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯ' ಎಂಬ ನುಲಿಯ ಚಂದಯ್ಯನ ಸಂದೇಶ ಕುಳಿತೆಡೆಯಿಂದಲೇ ರಾಶಿ ರಾಶಿ ದ್ರವ್ಯ ಸಂಪಾದಿಸುವ ಆಧುನಿಕ ಶ್ರೀಮಂತರ ಮನವನ್ನು ಮುಟ್ಟುವುದಾದರೆ ಲೋಕಕ್ಕೆ ಕಲ್ಯಾಣವಾದೀತು. 'ಕಾಯಕ ವೆಂದು ಕಾಯವ ಬಳಲಿಸದೆ, ತನು ಕರಗದೆ ಮನ ನೋಯದೆ, ಬೇಡಿ ಕಾಡಿ ಮಾಡುವುದು ದಾಸೋಹವೇ' ಎಂದು ಶಿವಲೆಂಕಮಂಚಣ್ಣ ಪ್ರಶ್ನಿಸುತ್ತಾನೆ.

*ಕೃಷಿ ಕೃತ್ಯ ಆವ ಕಾಯಕದಿಂದಾದಡೇನು?*
*ತನುಮನ ಬಳಲಿಸಿ ಗಳಿಸಿ ತಂದು, ಗುರುಲಿಂಗ*
*ಜಂಗಮಕ್ಕೆ ಮೆಚ್ಚಿಸಿ*
*ದಾಸೋಹವ ಮಾಡುವ ಪರಮಸದ್ಭಕ್ತನ ಪಾದವ*
*ತೋರಯ್ಯ ಎನಗೆ*
ಅದೆಂತೆಂದೊಡೆ, ಆತನ ತನು ಶುದ್ಧ, ಆತನ ಮನ
ಶುದ್ಧ, ಆತನ ನಡೆ ಶುದ್ಧ, ನುಡಿ ಎಲ್ಲ ಪಾವನವು.

ಅಂಥಿಂಥ ಕಾಯಕವೆಂಬ ನಿಯಮವಿಲ್ಲ, ಎಲ್ಲ ಕಾಯಕವೂ ಶುದ್ಧವಾದದ್ದೇ; ಅಂಥ ಕಾಯಕಸ್ತನ ಮನೆಯೇ ಕೈಲಾಸ ವೆಂದು ಜ್ಞಾನಿ ಚೆನ್ನಬಸವಣ್ಣ ನುಡಿಯುತ್ತಾನೆ. ಜಂಗಮನೇ ಕಾಯಕ ದಾಸೋಹಗಳ ಸೇತು ಶಕ್ತಿ, ಅಸಂಗ್ರಹ ಮತ್ತು ರೊಟ್ಟಿ ದುಡಿಮೆಗಳನ್ನು ಗುರಿಯಾಗುಳ್ಳ ಕಾಯಕ ದಾಸೋಹಗಳಿಂದಲೇ ಆರ್ಥಿಕ ಸಮಾನತೆ ಮಾತ್ರವಲ್ಲ, ಸರ್ವಸಮಾನತೆ ಸಾಧ್ಯವೆಂಬುದನ್ನು ಲೋಕವಿನ್ನೂ ಅರಿಯ ಬೇಕಾಗಿದೆ.

-ಮುಂದುವರೆಯುತ್ತದೆ.

## ಪ್ರಕೃತಿ ವೈದ್ಯ

### ಬಸಳೆ

ಮಲೆನಾಡಿನಲ್ಲಿ ಸೊಪ್ಪಿನ ರೂಪದಲ್ಲಿ ಚಿರಪರಿಚಿತ ವಾಗಿರುವ ಬಸಳೆ ಬಳ್ಳಿಯ ರೂಪದಲ್ಲಿ ಹಬ್ಬುವ ಸಸ್ಯ. ಅಮೃತ ವಲ್ಲರಿ. ಉಪೋದಿಕಾ, ಪೋತರೀ ಎಂಬ ಹಲವು ಸಂಸ್ಕೃತದ ಹೆಸರು ಹೊತ್ತ ಬಸಳೆಯಲ್ಲಿ ಬಿಳಿ ಹಾಗೂ ಕೆಂಪು ಬಣ್ಣದ ಬಸಳೆ ಸಸ್ಯಗಳಿವೆ.

ಹಚ್ಚ ಹಸುರಾದ ಎಲೆಯನ್ನು ಮೃದುವಾಗಿರುವ ಕಾಂಡವನ್ನು ತಾಯಿ ಸಸ್ಯದಿಂದ ಬೇರ್ಪಡಿಸಿ ತಂಪಾದ ನೆಲದಲ್ಲಿ ನೆಟ್ಟರೆ ಮತ್ತೆ ಮೂರ್‍ನಾಲ್ಕು ತಿಂಗಳಲ್ಲಿ ಸಮೃದ್ಧ ವಾಗಿ ಬೆಳೆದಿರುತ್ತದೆ ಬಸಳೆ. ಹೆಚ್ಚಾಗಿ ಉಪಯೋಗಿಸುವ ಬಿಳಿ ಬಸಳೆ ಅಂಟಿನ ಗುಣ ಹೊಂದಿದ್ದು ಸ್ವಲ್ಪ ಸಿಹಿಯಾಗಿರುತ್ತದೆ. ದೇಹಕ್ಕೆ ತಂಪು ನೀಡುವ ಗುಣವಿರುವ ಬಸವಳೆಯನ್ನು ವಾತ, ಮಲಬದ್ಧತೆ, ಹೊಟ್ಟೆಯುರಿ, ಬಾಯಿ ಹುಣ್ಣು ಮುಂತಾದ ತೊಂದರೆಗೆ ಉಪ ಯೋಗಿಸುತ್ತಾರೆ. ಹೆಚ್ಚಿನ ಪೌಷ್ಠಿಕಾಂಶ ಹಾಗೂ ಕಬ್ಬಿಣಾಂಶ ಹೊಂದಿರುವ ಬಸಳೆ ಮಕ್ಕಳಿಗೆ ಮತ್ತು ಗರ್ಭಿಣಿಯರಿಗೆ ಮೇಲೆ ವಿವರಿಸಿದ ಸಮಸ್ಯೆ ಯುಂಟಾದಾಗ ಉಪ ಯೋಗಿಸಬಹುದು.

ಬಸಳೆಯ ಎಲೆ-ಕಾಂಡದೊಂದಿಗೆ ಹೆಸರುಕಾಳು, ತೊಗರಿಬೇಳೆ ಸೇರಿಸಿ ತಯಾರಿಸಿದ ಪಲ್ಯದ ಸೇವನೆ ಯಿಂದ ವಾತದ ಸಮಸ್ಯೆ, ಮಲದ್ಧತೆ, ಹೊಟ್ಟೆಯುರಿ, ಬಾಯಿಹುಣ್ಣಿನ ತೊಂದರೆ ಕಡಿಮೆಯಾಗುತ್ತದೆ.





# ದಲಿತ ವರ್ಗದ ಶರಣ ಪ್ರತಿನಿಧಿ ಮೇದಾರ ಕೇತಯ್ಯ

-ಯು.ಎಸ್. ಸಂಗನಾಳಮಠ, 'ಜ್ಯೋತಿರ್ಲಿಂಗ' ಶಿವಮೊಗ್ಗ ರಸ್ತೆ, ಹೈಸ್ಕೂಲ್ ಬಡಾವಣೆ, ಹೊನ್ನಾಳಿ-೫೭೭ ೨೧೭.

*ಒಂದು ಬಿದಿರಿಗೆ ಕವೆ ಮೂರು,*
*ಆ ಕವೆಯೊಳಗೆ ಲಕ್ಷ ಸಿಬಿರು*
*ಮೂರು ಕವೆ ತೊಟ್ಟರಿ, ಲಕ್ಷ ಸಿಬಿರು ಬಿಡಿಸಿ*
*ಬಿದಿರ ಹೊರೆ ಹೊರೆಯಲ್ಲಿ ನೆಯ್ದಡೆ*
*ತೊಟ್ಟಿಲು ಸಾಯ ಕಾಣದಂತೆ ನಾಲ್ಕು ಕಾಲನಿಕ್ಕಿ*
*ಅಂದವಾದ ತೊಟ್ಟಿಲು ದಂಡೆಯನಿಕ್ಕಿ*
*ಶ್ರುತ-ದೃಷ್ಟವೆಂಬೆರಡು ದ್ವಾರದಲ್ಲಿ ತೊಟ್ಟಿಲ ಕಟ್ಟಿ*
*ಗವರೇಶ್ವರ ಲಿಂಗಕ್ಕೆ ಹುಟ್ಟು ಹೋಗೋ ಎಂದು*
*ಜೋಗುಳವಾಡಿದೆ.*

ಇದು ಶಿವಭಕ್ತ ಮೇದಾರ ಕೇತಯ್ಯನ ವಚನ. ಮೇದಾರ ಕೇತಯ್ಯ ಒಬ್ಬ ಕಷ್ಟ ಜೀವಿ. ಪ್ರತಿದಿನ ಬಿದಿರನ್ನು ಕಡಿದು ತಂದು ಅವುಗಳಿಂದ ಬುಟ್ಟಿ, ಮೊರ ಮೊದಲಾದವುಗಳನ್ನು ಹೆಣೆದು ಅವುಗಳನ್ನು ಮಾರಿ ಬಂದ ಹಣದಿಂದ ಜಂಗಮಾರ್ಚನೆಯ ಕಾಯಕ ಮಾಡುತ್ತಿದ್ದನು. ಜಂಗಮಾರ್ಚ ನೆಯ ನಂತರ ಪ್ರಸಾದ ಸ್ವೀಕಾರ. ಅವನಿಗೆ ಸಾಂತವ್ವನೆಂಬ ಸತಿ ಇದ್ದಳು.

ಜನಪದ ಸಾಹಿತ್ಯದಲ್ಲಿ-
*'ಮಲೆನಾಡ ಗುಡಿಯೊಳಗೆ ಉಳಿವೆ ಬೆಟ್ಟದ ಕೆಳಗೆ*
*ಬೇಲೂರ ಕೇತ ಮೇದಾರ-ಕಾಡೊಳಗೆ*
*ಬೆಳೆದಾಡಿ ಕಲೆತ ಶಿವ ಮತವ*
*ಕೇತಯ್ಯ ನಿನ ಮಡದಿ ಸಾತವ್ವಳೆಂಬವಳು*
*ಜಾತಿ ಮೇದರರದು ಕಸಬಿನಲಿ - ನಾಡೊಳಗೆ*
*ನೀತಿ ಶಿವಮತದ ಒರೆಗಲ್ಲು !"*
ಎಂಬ ಜನಪದದಿಂದ ಕೇತಯ್ಯನ ಪೂರ್ವಾಪರ ತಿಳಿಯುತ್ತದೆ.

ಕಲ್ಯಾಣದ ಕಡೆಯಿಂದ ಬಂದ ಜಂಗಮನೊಬ್ಬನಿಂದ ಬಸವಣ್ಣ ನಡೆಸುತ್ತಿದ್ದ ಕಾಯಕ ದಾಸೋಹಗಳ ಅನುಭವ ಮಂಟಪದ ಸುದ್ದಿ ಈ ದಂಪತಿಗಳಿಗೆ ತಿಳಿಯುತ್ತದೆ. ಮಲೆನಾಡಿನಿಂದ ಕಲ್ಯಾಣಕ್ಕೆ ಬಂದು ಅಲ್ಲೂ ತಮ್ಮ ಕಾಯಕ ವನ್ನು ಮುಂದುವರೆಸುತ್ತಾರೆ. ಅವರಿಗೆ ಬಸವಣ್ಣನೇ ಪ್ರಾಣ, ಚೈತನ್ಯ ಇವನ ಕರಕುಶಲತೆಯಿಂದ ಬುಟ್ಟಿ-ತೊಟ್ಟಿಲುಗಳು ಜನಪ್ರಿಯವಾಗುತ್ತವೆ. ಮಾರಾಟದ ಹಣದಿಂದ ನಿತ್ಯ ಜಂಗಮ ದಾಸೋಹ ನಡೆಸುತ್ತಿದ್ದನು.

ಇಂಥ ನಿಷ್ಠಾಶಿವಭಕ್ತನೂ ಸಹ ಶಿವಲೀಲೆಯ ಪರೀಕ್ಷೆ ಎದುರಿಸಬೇಕಾಗುತ್ತದೆ. ಒಂದು ದಿನ ಕೇತಯ್ಯ ಬಿದುರು ತರಲು ಅಡವಿಗೆ ಹೋದನು. ಬಿದಿರ ಬುಡಕ್ಕೆ ಕೊಡಲಿ ಏಟು ಹಾಕಿದಾಗ ಬಿದಿರ ಕೊಳವೆಯಿಂದ ಮುತ್ತು, ಹೊನ್ನು ಸುರಿಯಲು ಆರಂಭವಾಯಿತು. ಅದನ್ನು ಕಂಡು ಕೇತಯ್ಯ ನಿಗೆ ಆಶ್ಚರ್ಯವಾಯಿತು. ಆದರೆ ಆಶೆ ಹುಟ್ಟಲಿಲ್ಲ, ತನ್ನ ಕಾಯಕದ ಫಲ ಅಲ್ಲವೆಂದು ಅದನ್ನು ಮುಟ್ಟಲಿಲ್ಲ. ಮತ್ತೊಂದು ಬಿದಿರಿನ ಬಳಿ ಹೋಗಿ ಕೊಡಲಿ ಹಾಕಿದರೆ ಅಲ್ಲಿಯೂ ಹಾಗೆ. ಮತ್ತೆ ಬೇರೆ ಬಿದಿರಿಗೆ ಹಾಕಿದರೆ ಅಲ್ಲಿಯೂ ಅದೇ ಅನುಭವ. ಎಲ್ಲಿ ನೋಡಿದರೂ ಬಂಗಾರದ ಹುಳು. ಅದಕ್ಕೆ ಸಂಜೆಯ ಹೊತ್ತಿಗೆ ಗಿಡವನ್ನು ಹತ್ತಿ ಬಿದಿರು ಕಡಿಯುತ್ತಿದ್ದಂತೆ ಜಾರಿ ಕೆಳಗೆ ಬಿದ್ದ. ಬಿದ್ದ ರಭಸದಲ್ಲಿ ಬಿದಿರಿನ ಕೂಳೆ ಎದೆಗೆ ನೆಟ್ಟಿತು. ಕಾಯಕ-ದಾಸೋಹದ ಛಲದಿಂದ ಆ ನೋವಿನಲ್ಲಿ ಮನೆಗೆ ಬಂದು, ತಂದ ಬಿದಿರಿನಲ್ಲಿ ಬುಟ್ಟಿ ಮಾಡಿ ಅದನ್ನು ಮಾರಿ ಬರಲು ಪತ್ನಿಗೆ ಸೂಚಿಸಿದ. ಬಂದ ಹಣದಿಂದ ಜಂಗಮ ದಾಸೋಹ ಮಾಡಿದಳು. ನಂತರ ಕೇತಯ್ಯ ತನ್ನ ಎದೆಯಲ್ಲಿ ನೆಟ್ಟಿದ ಕೂಳೆ ತೆಗೆಯಲು ಹೇಳುತ್ತಾನೆ. ಆ ಶರಣಸತಿ ಪತಿಯಾಜ್ಞೆ ಪಾಲಿಸಲು ರಕ್ತ ಚಿಮ್ಮಲು ಪ್ರಾರಂಭಿಸಿತು. ಶಿವನ ಒಲುಮೆಗಾಗಿ ಕಾದಿದ್ದ ಕೇತಯ್ಯ ಕಣ್ಣು ಮುಚ್ಚುತ್ತಾನೆ.

ಬೆಳಗಾಗುತ್ತಲೇ ಹೂಗಾರ ಮಾದಣ್ಣ ಕೇತಯ್ಯನ ಸುದ್ಧಿಯನ್ನು ಅನುಭವ ಮಂಟಪಕ್ಕೆ ಮುಟ್ಟಿಸುತ್ತಾನೆ. ಬಸವಣ್ಣನ ಪ್ರಾಣವೂ ಹೋಯಿತು. ಮಡಿವಾಳ ಮಾಚಯ್ಯ ಈ ವಿಷಯ ಕೇಳಿ

*ಗುಡುಗಿತ್ತು ಅಯಿದು ಬೆರಳ ಪಂಚನಾದವು*
*ಸಿಡಿಲು ಕೋಟಿ ಹೊಡೆದಂತೆ*
*ನಡುಗಿತೀರೇಳು ಪೊಡವಿ, ಬೆಚ್ಚಿ ಗಗನವು*
*ಒಡೆಯದಜಾಂಡ ಮಂಡಲವು ಎಂಬಂತೆ*
ಶಿವನಿಗೆ ಡಂಗುರವಿಕ್ಕಿ ಅವರಿಬ್ಬರ ಪ್ರಾಣವನ್ನು ಹಿಂದಕ್ಕೆ ಪಡೆದನು.

ಈ ಪ್ರಸಂಗವನ್ನು ಕೇತಯ್ಯ ತನ್ನ ಒಂದು ವಚನದಲ್ಲಿ ಅಮರಗಣಂಗಳು ಮುನಿದು ಎನ್ನ ಕೈಲಾಸಕ್ಕೊಯಿಸಿದರೆ ಸದ್ಯೋನ್ಮುಕ್ತಿಯ ತೋರಲೆಂದು ಮರ್ತ್ಯಕ್ಕೆ ಮರಳಿ ತಂದರು ಸಂಗನ ಬಸವಣ್ಣನೆ ಗುರುವೆನಗೆ'.

ಮೇಲಿನ ಕಥೆಯ ಸಾರವೆಂದರೆ ಮೇದಾರ ಕೇತಯ್ಯ ಹೊನ್ನನ್ನು ಕಸಕ್ಕಿಂತ ಕಡೆಯಾಗಿ ಕಾಣುತ್ತಿದ್ದನು. ಶರಣರು ತಮ್ಮ ಶ್ರಮವಿಲ್ಲದೆ ಹೊನ್ನು ಸಿಕ್ಕಿದರೂ ಹುಳು ಎಂದು ಭಾವಿಸುತ್ತಾರೆ. ಕಾಯಕ-ಸತ್ಯ ಶುದ್ಧವಾಗಿರಬೇಕು, ಕಾಯಕ-ದಾಸೋಹಕ್ಕೆ ನೋವಿದ್ದರೂ ನರಳುವುದಿಲ್ಲ. ಸಾವು ಬಂದರೂ ಕಳವಳ ಹೊಂದಿವುದಿಲ್ಲ ಎಂಬುದನ್ನು ತಿಳಿಸುತ್ತದೆ.

ಭಕ್ತಂಗೆ ಸುಖವೂ ಸರಿ ದುಃಖವೂ ಸರಿ ಉರಿಸಿರಿ ಉಭಯವೂ ಸಿರಿ' ಎಂಬ ಮಾತಿನಲ್ಲಿ ಜೀವನ ಸಾರವಿದೆ.

ಹೀಗೆ ಮೇದಾರ ಕೇತಯ್ಯ ಕಾಯಕದ ಮೂಲಕ ಲಿಂಗಾಂಗ ಸಾಮರಸ್ಯ ಹೊಂದಿದ. ಈತನ ಅಂಕಿತ-ಗವರೇಶ್ವರ. ಗವರ ಎಂದರೆ ಬಿದಿರು ಕಾಯಕ.

ಈ ಲೇಖನದ ಪ್ರಾರಂಭದಲ್ಲಿ ಕೇತಯ್ಯನ ವಚನವಿದೆ. ಇಲ್ಲಿ ಕೇತಯ್ಯ ಬಿದಿರನ್ನು ಸೀಳಿ, ಬಿದಿರ ಹೊರೆ ಹೊರೆಯಲ್ಲಿ ನೇಯ್ದ ತೊಟ್ಟಿಲ ಚಿತ್ರದಲ್ಲಿ ಮೂರು ಕವೆಯ ಉದಾಹರಣೆ ಯಿಂದ ತ್ರಿಗುಣಗಳ ಲಕ್ಷಣಗಳನ್ನು ತ್ರಿವಿಧ (ಗುರು-ಲಿಂಗ-ಜಂಗಮ)ಗಳ ಪ್ರಭಾವದಿಂದ ನಿಗ್ರಹಿಸಿ, ಸಂದು ಕಾಣದಂತೆ ಎಂದರೆ ಚಂಚಲ ಚಿತ್ತ ಹೊಂದದೇ ನೇಯ್ದನೆಂದೂ, ನಾಲ್ಕು ಕಾಲುಗಳು ನಾಲ್ಕು ಪುರುಷಾರ್ಥಗಳು ಎಂದೂ, ಈ ತೊಟ್ಟಿಲನ್ನು ಶೃತ (ಗುರು ಕೊಟ್ಟ ಮಂತ್ರ) ದೃಷ್ಟ (ಗುರು ಕೊಟ್ಟ ಇಷ್ಟಲಿಂಗ) ಎಂಬ ದಾರಗಳನ್ನು ಕಟ್ಟಿ ತೂಗುವುದಕ್ಕೆ ಸಿದ್ಧ ಮಾಡಿದುದಾಗಿ ಹೇಳುತ್ತಾನೆ. ಹುಟ್ಟು ನೆಟ್ಟು ಹೋಗು ಎಂದು ಜೋಗುಳ ಹಾಡಿದಾಗ ಆ ತೊಟ್ಟಿಲ ತೂಗುತ್ತದೆ. ಆ ತೊಟ್ಟಿಲೊಳಗೆ ಇರುವುದು ಶಿಶು-ಲಿಂಗ. ಅದಕ್ಕೆ ಶಿವನೇ ರಕ್ಷಕ. ಜಗತ್ತೇ ಜೋಗುಳ ಹಾಡುತ್ತದೆ. ಎಂಥ ಭವ್ಯ ಅನುಭವ!.

*

**ವಚನ**

ಅರ್ಥವುಂಟೆಂದು ಅಹಂಕರಿಸಿ ಮಾಡುವನ ಭಕ್ತಿ
ತೊತ್ತಿನ ಕೂಟದ ತೂರ್ಯ ಮೇಳದಂತೆ
ತನು-ಮನ-ಧನದಲ್ಲಿ ವಂಚನೆಯುಳ್ಳ
ಪ್ರಪಂಚಿಯ ಮನೆಯ ಕೂಳು ಶುನಕನ
ಬಾಯಲಿಂದ
ಪ್ರತಿಶುನಕ ತಿಂದಂತೆ ಕಾಣಾ ರಾಮನಾಥಾ
-ಜೇಡರ ದಾಸಿಮಯ್ಯ

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

'ಸಿದ್ಧಗಂಗಾ' ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಮನಗಂಡು ಆಜೀವ ಸದಸ್ಯರು ಸ್ಪಂದಿಸಿ ಹೆಚ್ಚುವರಿ ಚಂದಾ ೫೦೦ ರೂ./೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಏನೆಂದರೆ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ನಿರಂತರವಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

ತಮ್ಮ ವಿಳಾಸದಲ್ಲಿರುವ **LM** ನಂಬರ್ ಸೂಚಿಸಿ ಬಾಕಿ ಆಜೀವ ಚಂದಾವನ್ನು ನಗದು/ ಎಂ.ಓ/ ಚೆಕ್/ ಡಿ.ಡಿ. ಮೂಲಕ 'ಸಿದ್ಧಗಂಗಾ' ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳಿಸಲು ವಿನಂತಿಸಿಕೊಳ್ಳಲಾಗಿದೆ.

ನಿಮ್ಮ ವಿಳಾಸ ಬದಲಾದಾಗ ನಿಮಗೆ ಕೊಟ್ಟಿರುವ ಆಜೀವ ಸದಸ್ಯತ್ವದ ನಂಬರನ್ನು ತಪ್ಪದೆ ತಿಳಿಸಿರಿ. ಇದರಿಂದ ನೇರವಾಗಿ ಪತ್ರಿಕೆ ನಿಮಗೆ ತಲುಪಲು ಸಾಧ್ಯವಾಗುತ್ತದೆ. ಆಗಾಗ್ಗೆ ಬದಲಾಗುವ ನಿಮ್ಮ ಹೊಸ ವಿಳಾಸವನ್ನು ಪತ್ರಿಕಾ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

**ಪ್ರಕಾಶಕರು**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.





## ಜೇಡರ ದಾಸಿಮಯ್ಯ

-ಕೆ.ಐ. ಪಾಟೀಲ, ಪಾರು ಪ್ರಕಾಶನ, ಸ್ಟೇಷನ್ ರೋಡ್, ಗದಗ-೫೮೨ ೧೦೧.

11ನೇ ಶತಮಾನದಲ್ಲಿ ಕ್ರಿ.ಶ. 1040ರ ಸುಮಾರಿಗೆ ಕರ್ನಾಟಕದ ಕಲಬುರ್ಗಿ ಜಿಲ್ಲೆಯ ಮುದೇನೂರಿನಲ್ಲಿ ದಾಸಿಮಯ್ಯನ ಜನನವಾಗಿದೆ ಎಂದು ತಿಳಿದು ಬರುತ್ತದೆ. ತಂದೆ ರಾಮಯ್ಯ ಮತ್ತು ತಾಯಿ ಶಂಕರಮ್ಮ. ಎಳೆತನ ದಲ್ಲಿಯೇ ದಾಸಿಮಯ್ಯನಿಗೆ ವೀರಶೈವ ಮತದಲ್ಲಿ ಪ್ರಚಲಿತ ವಿದ್ದ ಲಿಂಗಾರ್ಚನೆ ಮತ್ತು ಜಂಗಮ ಸೇವೆಗಳ ಕಡೆಗೆ ಒಲವು ಹರಿಯಿತು. ಆತನು ಹುಟ್ಟಿದ್ದು ಜೇಡರ ಕುಲ. ಅಂದರೆ ಬಟ್ಟೆ ನೇಯುವ ಉದ್ಯೋಗವನ್ನು ಅವಲಂಬಿಸಿದ್ದ ಕುಲ. ವರ್ಣಾಶ್ರಮ ಪರಾಕಾಷ್ಠೆಯಲ್ಲಿದ್ದ ಆಗಿನ ಸಮಯದಲ್ಲಿ ಜೇಡರ ಕುಲವನ್ನು ಶೂದ್ರರಲ್ಲಿಯೇ ಕೆಳಮಟ್ಟದ್ದೆಂದು ಪರಿಗಣಿಸಲಾಗುತ್ತಿತ್ತು. ಮುದೇನೂರಿನ ಅಧಿದೈವವಾದ ರಾಮನಾಥ ಲಿಂಗನ ದೇವಸ್ಥಾನ ಆ ಗ್ರಾಮದಲ್ಲಿತ್ತು. ಆ ಸ್ವಾಮಿಯ ಪೂಜಾಹಕ್ಕು ಉಚ್ಚ ಕುಲದವರಾದ ಬ್ರಾಹ್ಮಣರ ಕಡೆಗಿತ್ತು. ಪೂಜಾರರು ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದವರಿಗೆ ಗರ್ಭಗುಡಿಗೆ ಪ್ರವೇಶ ನೀಡುತ್ತಿರಲಿಲ್ಲ. ಇದರಿಂದ ನೊಂದ ದಾಸಿಮಯ್ಯ ದೇವಾಲಯವನ್ನು ಮುಚ್ಚಿ ಬೀಗ ಜಡಿದ ಸಮಯದಲ್ಲಿ ಅನನ್ಯ ಭಕ್ತಿಯಿಂದ ರಾಮನಾಥ ನನ್ನು ಪ್ರಾರ್ಥಿಸಲು ಗರ್ಭಗುಡಿಯ ಬೀಗ ಕಳಚಿ ಬಾಗಿಲು ತೆರೆದುಕೊಂಡು ರಾಮನಾಥನು ದಾಸಿಮಯ್ಯನಿಗೆ ದರ್ಶನ ವಿತ್ತನಂತೆ. ಈ ಘಟನೆ ಕಾಗಿನೆಲೆಯ ಮಂದಿರದಲ್ಲಿಯ ಕೃಷ್ಣನು ಕನಕದಾಸರಿಗೆ ಗರ್ಭಗುಡಿಯ ಹಿಂದಿನ ಗೋಡೆ ಒಡೆದು ದರ್ಶನವಿತ್ತದ್ದನ್ನು ನೆನಪಿಗೆ ತರುತ್ತದೆ.

ಮರುದಿನ ಬಾಗಿಲಿನ ಬೀಗ ಕಳಚಿ ಬಿದ್ದು ಬಾಗಿಲು ತೆರೆದೇ ಇದ್ದುದನ್ನು ಕಂಡ ಪೂಜಾರರು ಹೌಹಾರಿದರು. ಘಟನೆಯ ಪ್ರತ್ಯಕ್ಷದರ್ಶಿಗಳು ಈ ಸಮಾಚಾರವನ್ನು ಪೂಜಾರ ರಿಗೆ ತಿಳಿಸಿದರು. ಆಗ ಪೂಜಾರರು ಗ್ರಾಮದ ದಳವಾಯಿ ಯಲ್ಲಿ ದಾಸಿಮಯ್ಯನೇ ದೇವಾಲಯದ ಬೀಗ ಒಡೆದು ಬಾಗಿಲು ತೆರೆದು ಹೋಗಿದ್ದಾನೆ ಎಂದು ದೂರು ನೀಡಿದರು. ದಳವಾಯಿಯು ಸಾರಾಸಾರ ವಿಚಾರ ಮಾಡಿ ಸಾಕ್ಷಾತ್ಕಾರ ಮಾಡಿಕೊಳ್ಳಲು ದಾಸಿಮಯ್ಯನನ್ನು ಕರೆಸಿದಾಗ ನಡೆದ ಸಂಗತಿಯನ್ನು ತಿಳಿಸಿದನು. ಆಗ ಪೂಜಾರರು ಯಾರೂ ಇಲ್ಲದಾಗ ಈ ಘಟನೆ ನಡೆದಿದೆ, ನಿನ್ನ ಭಕ್ತಿ ನಿಜವಾಗಿದ್ದಲ್ಲಿ ಎಲ್ಲರೆದುರಿಗೆ ಬೀಗ ತೆಗೆದು ನೋಡೋಣ ಎಂದು ಸವಾಲೆಸೆದರಂತೆ. ಆಯಿತು ರಾಮನಾಥನ ಇಚ್ಛೆ ಇದ್ದಂತೆ ಆಗಲಿ ಎಂದು ದಾಸಿಮಯ್ಯ ಊರ ಜನರೆಲ್ಲರೂ ದೇವಾಲಯದಲ್ಲಿ ನೆರೆದಿದ್ದಾಗ ರಾಮನಾಥಲಿಂಗನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಲಾಗಿ ಬೀಗ ಕಳಚಿ ಗರ್ಭಗುಡಿಯ ಬಾಗಿಲು ತೆರೆದುಕೊಂಡಿತಂತೆ. ಇದನ್ನು ಪ್ರತ್ಯಕ್ಷ ಕಂಡವ ರೆಲ್ಲರೂ ದಾಸಿಮಯ್ಯನ ಭಕ್ತಿಯನ್ನು ಬಾಯ್ತುಂಬ ಹೊಗಳಿ ಕೊಂಡಾಡಿದರಂತೆ. ಪೂಜಾರಿಗಳು ಮತ್ತು ದಳವಾಯಿ ದಾಸಿಮಯ್ಯನ ಪಾದಕ್ಕೆ ಬಿದ್ದು ಕ್ಷಮೆ ಕೇಳಿದರಂತೆ.

ಅಂದಿನಿಂದ ದಾಸಿಮಯ್ಯನ ಭಕ್ತಿಯ ಖ್ಯಾತಿಯು ನಾಡಿನಲ್ಲಿ ಹಬ್ಬಿತು. ಆತನ ಕುಲಬಾಂಧವರು ಅಂದರೆ ಜೇಡರು ಒಮ್ಮತದಿಂದ ಆತನನ್ನು ತಮ್ಮ ಕುಲಗುರು ಎಂದು ಒಪ್ಪಿಕೊಂಡದ್ದಲ್ಲದೇ ತಾವು ಜೇಡ ಕುಲದವರು ಎಂದು ಹೆಮ್ಮೆಯಿಂದ ಹೇಳಿಕೊಂಡರು. ಅದಕ್ಕೆ ದಾಸಿಮಯ್ಯ "ದಾಸಕುಲದ ಈಶಂಗಲ್ಲದೇ ಅನ್ಯರಿಗೆ ಶರಣೆನ್ನ, ಆಶೆ ಮಾಡ, ನೋಡ ಅನ್ಯದೈವಂಗಳಿಗೆ" ಎಂದಿದ್ದಾನೆ. ಅಂಬಿಗರ ಚೌಡಯ್ಯನು ತನ್ನ ಒಂದು ವಚನ ದಲ್ಲಿ ಕತ್ತಿದ್ದ ಮುಡಳು ಜೇಡಂಗೆ ತೆರೆದಾಗ ಇಕ್ಕಿದ್ದ ಜನಿವಾರ ಬೀಯವಾದುವು ಎಂದು ಕುಟುವಾಗಿ ಖಂಡಿಸಿದ್ದು ಈ ಘಟನೆಯ ಹಿನ್ನಲೆಯಲ್ಲಿಯೇ ಎಂದು ಭಾವಿಸಲಾಗಿದೆ.

ಪ್ರಾರಂಭದಲ್ಲಿ ದಾಸಿಮಯ್ಯನೂ ಕುಲದ ಉಚ್ಚ ನೀಚ ತಾರತಮ್ಯದಿಂದ ಬಹುವಾಗಿ ನೊಂದಿಕೊಂಡಿದ್ದಾನೆ ಎಂದು ಕಾಣುತ್ತದೆ. ಆತನು ತನ್ನ ಅನೇಕ ವಚನಗಳಲ್ಲಿ ಜಾತಿಭೂತವನ್ನೇ ವಿಶೇಷವಾಗಿ ಖಂಡಿಸಿರುವುದು ಗೋಚರವಾಗುತ್ತದೆ. ಕುಲ ಮದ ತೊರೆದು ದೇವನನ್ನೊ ಲಿಸಿದ ಶರಣಂಗೆ ತಲೆಬಾಗುವೆ ಎಂದಿದ್ದಾನೆ. ಬ್ರಾಹ್ಮಣ ರೇನು ಕೊರಳಲ್ಲಿ ಜನಿವಾರ ಸಮೇತ ಜನಿಸುವರೇ? ತಮ್ಮ ಕುಲದ ಜೇಡರು ಕೈಯಲ್ಲಿ ಲಾಳಿ ಹಿಡಿದುಕೊಂಡೇ ಹುಟ್ಟುವರೇ? ಎಂಬುದು ದಾಸಿಮಯ್ಯನ ಪ್ರಶ್ನೆ. ಆತನ ವಚನಾಂಕಿತ ರಾಮನಾಥ ಎಂಬುದಾಗಿದೆ.

ದಾಸಿಮಯ್ಯನ ಭಕ್ತಿಯ ಖ್ಯಾತಿ ದಶ ದಿಕ್ಕುಗಳಲ್ಲಿ ಹಬ್ಬಿ 1060ರ ಸುಮಾರಿಗೆ ಆಂಧ್ರಪ್ರದೇಶದಲ್ಲಿ ಈಗಿನ ಹೈದರಾಬಾದ್ ಶಹರಕ್ಕೆ ಸಮೀಪದಲ್ಲಿರುವ ಪೊಟ್ಟಲ ಕೆರೆಯಲ್ಲಿ(ಈಗಿನ ಹೆಸರು ಪಟ್ಟಂಚೇರು) ರಾಜ್ಯಭಾರ ಮಾಡಿಕೊಂಡಿದ್ದ ಜಯಸಿಂಹ ದೊರೆಯ ರಾಣಿ ಸುಗ್ಗಲಾ ದೇವಿಯು ದಾಸಿಮಯ್ಯನನ್ನು ಕರೆಸಿ ಆತನಿಂದ ಲಿಂಗದೀಕ್ಷೆ ಪಡೆದಳು ಎಂಬುದಾಗಿ ಕ್ರಿ.ಶ. 1138ರಲ್ಲಿ ಕೆತ್ತಲಾದ ಒಂದು ಶಿಲಾ ಶಾಸನದಲ್ಲಿ ಉಲ್ಲೇಖವಿದೆ. ಅಲ್ಲದೇ ತೆಲಗು ಮಸಣಯ್ಯ ಎಂಬ ಶಿವಶರಣನು ತೆಲಗೇಶ್ವರ ಎಂಬ ಅಂಕಿತ ಹೊಂದಿದ ವಚನಗಳನ್ನು ಕನ್ನಡದಲ್ಲಿ ರಚಿಸಿದ್ದಾನೆ. ಇದರಿಂದ ಆ ಕಾಲದಲ್ಲಿ ಕನ್ನಡದ ಕಂಪು ನೆರೆರಾಜ್ಯಗಳಲ್ಲಿಯೂ ಪಸರಿಸಿತ್ತು ಎಂಬುದು ವೇದ್ಯವಾಗುತ್ತದೆ.

ಕನ್ನಡದಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ವಚನಗಳನ್ನು

ರಚಿಸಿರುವ ದಾಸಿಮಯ್ಯನಿಗೆ ಆದ್ಯ ವಚನಕಾರ ಎಂಬ ಅಗ್ಗಳಿಕೆಯಿದೆ. ಬರೀ ಸಂಖ್ಯೆಯ ದೃಷ್ಟಿಯಿಂದಲ್ಲದೇ ಆತನ ವಚನಗಳಲ್ಲಿ ಕಾಣಬರುವ ಪ್ರಾಸ ಬದ್ಧತೆ, ಶಬ್ದಗಳ ಸೌಂದರ್ಯ ಮತ್ತು ಗರ್ಭಿತಾರ್ಥಗಳು ಕಾರಣವಾಗಿರ ಬೇಕು. ಇದಲ್ಲದೇ ರಚಿತವಾದ ವಚನಗಳು ಸಂಸ್ಕೃತದ ಸೋಂಕಿಲ್ಲದೇ ಅಚ್ಚ ಕನ್ನಡದಲ್ಲಿವೆ. ದಾಸಿಮಯ್ಯನವರೆ ತಮಗಿಂತ ಪುರಾತನರಾದ ಕೆಲ ಶರಣರನ್ನು ನೆನೆಯುತ್ತ ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ? ಕಡೆಗೀಲು ಬಂಡಿಗಾಧಾರ. ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡ ಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ ಎಂದಿದ್ದಾನೆ. ಎಂದರೆ ಇವರಿಗಿಂತ ಪೂರ್ವದಲ್ಲಿ ಶಿವಶರಣರು ಆಗಿ ಹೋಗಿ ವಚನಗಳನ್ನು ರಚಿಸಿದ್ದರು ಎಂಬುದು ವೇದ್ಯವಾಗುತ್ತದೆ.

ಭಕ್ತಿಯುತ ಶರಣ ಜೀವನಕ್ಕೆ ಮತ್ತು ಘನಮಹಿಮನ ಸಾಕ್ಷಾತ್ಕಾರಕ್ಕೆ ಸಂಸಾರವನ್ನು ತ್ಯಜಿಸಬೇಕೆಂದೇನೂ ಇಲ್ಲ. ಆದರೆ ಕೈ ಹಿಡಿಯುವಾಕೆ ಅನುರೂಪಳಾಗಿ ಇರಬೇಕು. ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವನಿಗೆ ಎಂಬ ಸೂತ್ರ ದಾಸಿಮಯ್ಯನದು. ಪತಿಯಷ್ಟೇ ಭಕ್ತಳಾಗಿ ಶಿವನ ಸಾಕ್ಷಾತ್ಕಾರಕ್ಕಾಗಿ ಪರಿತಪಿಸುತ್ತ ಇರುವಲ್ಲಿ ಸಂಸಾರದ ವಿಷಯಗಳಿಗೆ ಮಹತ್ವ ನೀಡುವ ಸತಿಯಿದ್ದಲ್ಲಿ ಎತ್ತು ಏರಿಗೆಳೆದರೆ ಕೋಣ ಕೇರಿಗೆಳೆಯಿತು ಎಂಬಂತಾಗಿ ಇಬ್ಬರಿಗೂ ಸುಖವಿಲ್ಲದೇ ಇಬ್ಬರೂ ದಡ ಸೇರಲಾರರು ಎಂಬುದೇ ದಾಸಿಮಯ್ಯನ ನಿಲುವು. ಮುಂದೆ ಕಲ್ಯಾಣದಲ್ಲಿ ಮಿಂಚಿದ ಬಹುತೇಕ ಶರಣರು ಸತಿಪತಿಗಳಾಗಿದ್ದು ಕಾಯಕ ಅವಲಂಬಿಸಿ ಭಕ್ತಿಪೂರ್ವಕ ಜೀವನ ನಡೆಸಿ ಮುಕ್ತಿ ಹೊಂದಿದ್ದಾರೆ. ಕಾಯಕದಿಂದ ಬಂದ ಆದಾಯದಲ್ಲಿ ದಾಸೋಹ ನಡೆಸುವ ಸತಿಯರಾದ್ದಾಗಿ ಒಬ್ಬರಿಗೊಬ್ಬರ ಸಹಕಾರದಿಂದ ಅವರ ಶರಣ ಜೀವನ ಉಜ್ವಲವಾಗಿತ್ತು. ಆದ್ದರಿಂದಲೇ ದಾಸಿಮಯ್ಯ ತನ್ನ ಕಠಿಣ ಪರೀಕ್ಷೆಯಲ್ಲಿ ತೇರ್ಗಡೆಯಾಗುವ ಕನ್ಯಾಮಣಿಯನ್ನೇ ವಿವಾಹವಾಗುವ ನಿರ್ಧಾರ ಮಾಡಿ ಕೊನೆಗೆ ಆತನ ಕಠಿಣ ಪರೀಕ್ಷೆಯಲ್ಲಿ ತೇರ್ಗಡೆಯಾದ ಕಲಬುರ್ಗಿ ಜಿಲ್ಲೆಯ ಗಬ್ಬೂರ ಗ್ರಾಮದ ದುಗ್ಗಳೆ ಆತನ ಸತಿಯಾಗಿ ಕೈಹಿಡಿಯುತ್ತಾಳೆ. ದಾಸಿಮಯ್ಯನ ಕರಾರೆಂದರೆ ತನ್ನ ಸತಿಯಾಗುವವಳು ನೀರು ಬಳಸದೇ ಅನ್ನ ಮಾಡಬೇಕು ಎಂದಾಗಿತ್ತು. ಆಗ ಧುಗ್ಗಳೆ ಒಲೆಯ ಮೇಲಿಟ್ಟ ಅಕ್ಕಿಗೆ ಒಬ್ಬ ಜಂಗಮನ ಪಾದ ತೊಳೆದು ಪದೋದಕ ಹಾಕಿ ಅನ್ನ ಬೇಯಿಸಿದಳು. ಇದರರ್ಥ ಪಾದೋದಕ ನೀರು ಎಂದು ಪರಿಗಣಿಸಲ್ಪಡುವುದಿಲ್ಲ. ದುಗ್ಗಳೆ ಸಹ ಅಸಾಧಾರಣ ಶಿವಭಕ್ತಳಾದ್ದುದಲ್ಲದೇ ವಚನಗಳನ್ನೂ ರಚಿಸಿದ್ದಾಳೆ. ಆಕೆಯ ವಚನಾಂಕಿತ ದಾಸಯ್ಯಪ್ರಿಯ ರಾಮನಾಥಾ ಎಂಬುದಾಗಿದೆ.

ಬಸವಣ್ಣನ ಸಮಕಾಲೀನ ಶರಣ ಚಾಟಿಏಟಿನ ಚೌಡಯ್ಯ(ಅಂಗರ ಚೌಡಯ್ಯ) ಡಂಭಾಚಾರವನ್ನು ಖಂಡ ತುಂಡವಾಗಿ ಖಂಡಿಸಿದರೆ ದಾಸಿಮಯ್ಯನೂ ತನ್ನದೇ ಆದ ರೀತಿಯಲ್ಲಿ ಚುರುಕು ಮುಟ್ಟಿಸುವ ಶಬ್ದಗಳಲ್ಲಿ ಟೀಕಿಸಿದ್ದಾನೆ. ಅರ್ಥವುಂಟೆಂದು ಅಹಂಕಾರದಿಂದ ಮಾಡುವವನ ಭಕ್ತಿ ತೊತ್ತಿನ ಕೂಟದ ತೂರ್ಯ ಮೇಳದಂತೆ, ತನು, ಮನ, ಧನದಲ್ಲಿ ವಂಚನೆಯುಳ್ಳ ಪ್ರಪಂಚಿಯ ಮನೆಯ ಕೂಳು ಶುನಕನ ಬಾಯಿಯಿಂದ ಪ್ರತಿಶುನಕ ತಿಂದಂತೆ ಕಾಣಾ ರಾಮನಾಥಾ. ತಾತ್ಪರ್ಯವಿಷ್ಟೇ ಮಾಡುವ ಭಕ್ತಿ ನಿರ್ಮಲ ವಾಗಿರಬೇಕು. ಬಾಹ್ಯಾಡಂಬರದ ಸೋಂಕು ತಟ್ಟಿರಬಾರದು. ಇಂಥ ಭಕ್ತಿಯನ್ನು ಶಿವನು ಮೆಚ್ಚುವುದಿಲ್ಲ. ಇಲ್ಲಿ ಇದ್ದುಳ್ಳ ವರು ಮಾಡುವ ಆಡಂಬರದ ಭಕ್ತಿಯನ್ನು ದಾಸಿಮಯ್ಯ ಖಂಡಿಸಿದ್ದಾನೆ. ದೇವರಿಗೆ ಸಲ್ಲಿಸುವ ಭಕ್ತಿ ಮತ್ತು ದಾಸೋಹಕ್ಕೆ ವ್ಯಯಿಸುವ ಧನ ಶುದ್ಧ ಕಾಯಕದಿಂದ ಗಳಿಸಿದ್ದಾಗಿರಬೇಕು ಎಂಬುದು ದಾಸಿಮಯ್ಯನ ಅಭಿಮತ.

ಉಂಕಿಯ ನಿಗುಚಿ ಸರಿಗೆಯ ಸಮಗೊಳಿಸಿ ಎಂಬ ಆತನ ವಚನದ ಮೇಲಿಂದ ದಾಸಿಮಯ್ಯನ ವೃತ್ತಿ ನೇಕಾರಿಕೆ ಆಗಿತ್ತು ಎಂಬುದನ್ನು ನಾವು ಗ್ರಹಿಸಬಹುದಾಗಿದೆ. ತನ್ನ ನೇಯ್ಗೆ ವೃತ್ತಿಯಲ್ಲಿ ಬಟ್ಟೆ ತಯಾರಿಸಿ ಸಮೀಪದ ವ್ಯಾಪಾರಿ ಪಡಮೂಲೆಯ ಸ್ಥಳವಾದ ಸಿದ್ಧಾಪುರದ ಸಂತೆಯಲ್ಲಿ ಮಾರಾಟ ಮಾಡಿಕೊಂಡು ಬಂದ ಆದಾಯದಲ್ಲಿ ಜಂಗಮ ದಾಸೋಹ ನಡೆಸುತ್ತಿದ್ದನು. ಒಮ್ಮೆ ಒಂದು ಮಹಾ ಗಣಪರ್ವ ನಡೆಸಬೇಕೆಂದು ಆಲೋಚಿಸಿದ ದಾಸಿಮಯ್ಯ ಉತ್ಕೃಷ್ಟ ರೇಷ್ಮೆ ಬಳಸಿ ಬಹಳ ಬೆಲೆ ತರುವ ರೇಷ್ಮೆ ಬಟ್ಟೆ ನೇಯ್ದು ಸಿದ್ಧಾಪುರ ಸಂತೆಗೆ ಕೊಂಡೊಯ್ದನಂತೆ. ಈತನ ಕಾರ್ಯ ಮತ್ತು ದಾಸೋಹ ನಿಷ್ಠೆಯನ್ನು ಪರೀಕ್ಷಿಸಲು ಬಯಸಿದ ಶಿವನು ಜಂಗಮ ವೇಷದಿಂದ ಬಂದು ಆತನು ಶ್ರಮವಹಿಸಿ ನೇಯ್ದ ಅಮೂಲ್ಯ ರೇಷ್ಮೆ ವಸ್ತ್ರವನ್ನೇ ದಾನವಾಗಿ ನೀಡುವಂತೆ ಬೇಡಿದನಂತೆ. ಆಯಿತು ನಾನು ನಡೆಸಬೇಕೆಂದು ಯೋಚಿಸಿರುವ ಗಣಪರ್ವ ದಾಸೋಹವನ್ನು ಮುಂದಿನ ತಿಂಗಳು ಮಾಡಿದರಾಯಿತು ಎಂದು ಮನದಲ್ಲಿ ಆಲೋಚಿಸಿದ ದಾಸಿಮಯ್ಯ ಹಿಂದು ಮುಂದು ನೋಡದೇ ಜಂಗಮನಿಗೆ ದಾನ ನೀಡಿಬಿಟ್ಟನಂತೆ. ಅದು ಇಂಥ ಉದ್ದೇಶಕ್ಕಾಗಿ ನೇಯ್ದಿದ್ದು ಎಂದು ನೆಪ ಹೇಳಬಹುದು ಎಂದು ಭಾವಿಸಿದ್ದ ಶಿವನಿಗೆ ಆಶ್ಚರ್ಯ ಮತ್ತು ಸಂತೋಷ ಒಟ್ಟಿಗೆ ಆದವು. ಅದನ್ನು ತೋರಗೊಡದ ಶಿವನು ಆತನನ್ನು ಇನ್ನಷ್ಟು ಪರೀಕ್ಷಿಸುವ ಉದ್ದೇಶದಿಂದ ದಾಸಿಮಯ್ಯನ ಎದುರೇ ಆ ಅಮೂಲ್ಯ ಬಟ್ಟೆಯನ್ನು ಹರಿದುಬಿಟ್ಟನಂತೆ. ನಾನು ದಾನ ಕೊಟ್ಟ ವಸ್ತ್ರವು ನನ್ನಿಂದ ದಾಟಿದ ಮೇಲೆ ಅದರ ಮೇಲೆ ನನ್ನ ಒಡೆತನ ಇರುವುದಿಲ್ಲ. ಅದನ್ನು ಉಪಯೋಗಿಸುವ ವಿವೇಚನೆ ದಾನ ಸ್ವೀಕರಿಸಿದವನಿಗೆ ಬಿಟ್ಟಿದ್ದು. ಏನಾದರೂ ಮಾಡಿಕೊಳ್ಳಲಿ ಎಂದು ನಿರಾತಂಕವಾಗಿ ನಿಂತ ದಾಸಿಮಯ್ಯನನ್ನು ಕಂಡಿ ಆತನ ನಿರ್ಮೋಹ ಭಕ್ತಿಗೆ ಶಿವನು ಒಲಿದು ಆತನನ್ನು ಹರಸಿದನು. ಶಿವನ ಕರುಣೆಯಿಂದ ಮುಂದೆ ಆತನು ನಡೆಸಿದ ಮಹಾ ಗಣಪರ್ವ ದಾಸೋಹ ಯಾವ ಅಡೆತಡೆ ಯಿಲ್ಲದೇ ಕೈಗೂಡಿತಂತೆ.

*





## ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮೀಜಿಯವರ ಶತಮಾನೋತ್ಸವ ಸಮಾರಂಭದ ಅಂಗವಾಗಿ ಪೂರ್ವಭಾವಿಯಾಗಿ ನಡೆದ ದಾಸೋಹ ಸಮಿತಿಯ ಚರ್ಚಾಂಶಗಳು

ಈ ಮೇಲ್ಕಂಡ ಕಾರ್ಯಕ್ರಮಗಳು ಪೂಜ್ಯ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳ ದಿವ್ಯ ಉಪಸ್ಥಿತಿಯಲ್ಲಿ ಹಾಗೂ ಕನಕಪುರದ ದೇಗುಲಮಠದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ನಡೆಯಿತು.

ಪ್ರಾರಂಭದಲ್ಲಿ ವಿಶೇಷಾಧಿಕಾರಿಗಳಾದ ಶ್ರೀ ಎಸ್. ವಿಶ್ವನಾಥಯ್ಯನವರು ದಾಸೋಹ ವ್ಯವಸ್ಥೆಯ ಬಗ್ಗೆ ವಿವರ ನೀಡುತ್ತಾ ಇಪ್ಪತ್ತೆರಡು ದಾಸೋಹ ಮಂಟಪಗಳು (ಕೊಪ್ಪಲು), ಒಂದು ಬಾರಿಗೆ ಮೂವತ್ತು ಸಾವಿರ ಭಕ್ತಾದಿಗಳು ಪ್ರಸಾದ ಮಾಡುವ ವ್ಯವಸ್ಥೆ ಒಟ್ಟು ಒಂದು ದಿನಕ್ಕೆ ನಾಲ್ಕರಿಂದ ಐದು ಲಕ್ಷ ಭಕ್ತರು ಆಗಮಿಸುವ ನಿರೀಕ್ಷೆ. ಈ ಮೂರು ದಿನಗಳ ಪ್ರಸಾದ ವ್ಯವಸ್ಥೆಗೆ ಅಂದಾಜು ಒಂದು ಕೋಟಿ ಎಪ್ಪತ್ತೈದು ಲಕ್ಷದಿಂದ ಎರಡು ಕೋಟಿ ಆಗಬಹುದು ಎಂದು ಬೇಕಾಗುವ ಪದಾರ್ಥಗಳ ಪಟ್ಟಿ ನೀಡಿದರು. ಈ ವಿಚಾರ ಕೇಳಿ ಸಭೆಯಲ್ಲಿ ಸೇರಿದ್ದ ಭಕ್ತಾದಿಗಳು ತಮ್ಮ ಕೈಲಾದ ಸಹಾಯ ಮಾಡಲು ಮುಂದಾದರು. ಆ ವಿವರ ಇಂತಿದೆ.

1. ಶ್ರೀ ಅಶ್ವತ್ಥನಾರಾಯಣ– ದೇವನಹಳ್ಳಿ; ಇವರು ಒಂದು ಸಾವಿರ ಕ್ವಿಂಟಾಲ್ ಸೋನಾಮಸೂರಿ ಅಕ್ಕಿಯನ್ನು ಜೊತೆಗೆ ಆರು ಕುಡಿಯುವ ನೀರಿನ ಟ್ಯಾಂಕರ್‌ಗಳನ್ನು ನೀಡುತ್ತೇವೆ ಎಂದರು.
2. ಶ್ರೀ ಬಿ.ಎಸ್. ಪರಮಶಿವಯ್ಯನವರು, ಬೆಂಗಳೂರು– ಈಗಾಗಲೇ ನಮ್ಮ ಸಂಸ್ಥೆಯಿಂದ 50 ಲಕ್ಷ ರೂಗಳನ್ನು ದಾಸೋಹಕ್ಕೆ ನೀಡಿದ್ದೇವೆ. ಜೊತೆಗೆ ಒಂದು ದಾಸೋಹ ನಿಲಯದ ಸಂಪೂರ್ಣವ್ಯವಸ್ಥೆಯನ್ನು ನೋಡಿಕೊಳ್ಳುತ್ತೇವೆ ಎಂದರು.
3. ಶ್ರೀ ನಾರಾಯಣಸ್ವಾಮಿ ರೆಡ್ಡಿಯವರು, ಜರಗನಹಳ್ಳಿ, ಕನಕಪುರ ರಸ್ತೆ ಇವರು ದಾಸೋಹಕ್ಕಾಗಿ ಹತ್ತು ಲಕ್ಷ ರೂಗಳನ್ನು ನೀಡಿದ್ದೇವೆ. ಈ ಸಂದರ್ಭದಲ್ಲಿಯೂ ನನ್ನ ಕೈಲಾದ ಸೇವೆ ಸಲ್ಲಿಸುತ್ತೇನೆ ಎಂದರು.
4. ಶ್ರೀ ವಿಶ್ವನಾಥ್ ಮತ್ತು ಶ್ರೀ ಬಸವರಾಜು– ತರಕಾರಿ ವ್ಯಾಪಾರಿಗಳು, ಯಶವಂತಪುರ, ಇವರು ಐದು ಲೋಡ್ ತರಕಾರಿಯನ್ನು ನಾವೇ ಲಾರಿ ವ್ಯವಸ್ಥೆ ಮಾಡಿಕೊಂಡು ತರುತ್ತೇವೆಂದು ಆಶ್ವಾಸನೆ ನೀಡಿದರು.
5. ಶ್ರೀ ಮಲ್ಲಯ್ಯನವರು– ನೆಲಮಂಗಲ ತಾ॥ ಬಿ.ಜೆ.ಪಿ. ಅಧ್ಯಕ್ಷರು, ಇವರು 1500 ಭಕ್ತಾಧಿಗಳು ಊಟ ಮಾಡುವ ಕೊಪ್ಪಲಿನ ಎಲ್ಲಾ ವ್ಯವಸ್ಥೆಯನ್ನು (ದವಸ ಧಾನ್ಯಗಳನ್ನು ಬಿಟ್ಟು) ಶಾಮಿಯಾನ, ಪಾತ್ರೆಗಳು– ಅಡಿಗೆಯವರು ಬಡಿಸುವವರು ಇತ್ಯಾದಿ ವ್ಯವಸ್ಥೆ ಮಾಡುತ್ತೇವೆ ಎಂದರು.
6. ಶ್ರೀ ವೀರಭದ್ರಯ್ಯನವರು, ಹಳೇನಿಜಗಲ್ಲು, ಶ್ರೀಯುತರು ಮೂರು ದಿನಕ್ಕೆ ಬೇಕಾಗುವ ಉಪ್ಪಿನ ವ್ಯವಸ್ಥೆ ಮಾಡುತ್ತೇನೆ ಎಂದರು.
7. ಶ್ರೀ ಜಗದೀಶ್, ಹೊನ್ನೇನಹಳ್ಳಿ, 1 ಲಕ್ಷ ಲೋಟ, 1 ಲಕ್ಷ ಬಾಳೆ ಎಲೆ ನೀಡುತ್ತೇವೆ ಎಂದರು.
8. ಶ್ರೀ ಮಾದಪ್ಪನವರು, ಮಮತಾ ಫೈನಾನ್ಸ್, ಬೆಂಗಳೂರು ಇವರು ಒಂದು ದಾಸೋಹ ನಿಲಯಕ್ಕೆ ಬೇಕಾಗುವ ಎಲ್ಲಾ ವ್ಯವಸ್ಥೆಯ ಖರ್ಚನ್ನು ಹಣದ ಮುಖೇನ ನೀಡುತ್ತೇವೆ ಎಂದರು.
9. ಶ್ರೀ ಶಿವರುದ್ರಪ್ಪನವರು (ಎಂಟಗಾನಹಳ್ಳಿ) ಜಿಲ್ಲಾ ಪಂಚಾಯತ್ ಮೆಂಬರ್, ಶ್ರೀಯುತರು ಎರಡು ದಾಸೋಹ ನಿಲಯದ ವ್ಯವಸ್ಥೆಯನ್ನು ನಿರ್ವಹಿಸುತ್ತೇವೆ ಎಂದರು.
10. ಶ್ರೀ ಕೆಂಪರಾಜು ಮತ್ತು ಅವರ ಪುತ್ರ ಶ್ರೀ ಚಂದ್ರು ರವರು ಎರಡು ಲಕ್ಷದ ಐವತ್ತು ಸಾವಿರ ಬಾದುಷಾಹ ಸಿಹಿ ತಿಂಡಿಯನ್ನು ಮಾಡಿಸಿಕೊಡುತ್ತೇವೆ ಎಂದರು.
11. ಶ್ರೀ ಪಿ.ಆರ್. ಬಸವರಾಜು(ಪೆಪ್ಸಿ), ಬೆಂಗಳೂರು– ಇವರು ಐವತ್ತು ಕ್ವಿಂಟಾಲ್ ಸಕ್ಕರೆಯನ್ನು ನೀಡುವ ವಾಗ್ದಾನ ಮಾಡಿದರು.
12. ಶ್ರೀ ಪಂಚಣ್ಣನವರು, ಮಲ್ಲತ್ತಹಳ್ಳಿ, ಶ್ರೀಯುತರು ಒಂದು ಲಕ್ಷ ರೂ ದಾಸೋಹಕ್ಕೆ ನೀಡುತ್ತೇವೆ ಎಂದರು.
13. ಶ್ರೀ ಗುಂಡಪ್ಪ, ಮಲ್ಲತ್ತಹಳ್ಳಿ, ಶ್ರೀಯುತರು ಒಂದು ಲಕ್ಷ ರೂ ದಾಸೋಹಕ್ಕೆ ನೀಡುತ್ತೇವೆ ಎಂದರು.
14. ಶ್ರೀ ಬಸವರಾಜು ರಾಯರ ಪಾಳ್ಯ, ಶ್ರೀ ಉಮೇಶ್, ತಿಮ್ಮನಾಯ್ಕನಹಳ್ಳಿ, ಶ್ರೀ ರುದ್ರಪ್ಪ ಅಂಚೆಮನೆ, ಶ್ರೀ ಗಟ್ಟಿ ಬೈರಪ್ಪ, ದಾಬಸ್‌ಪೇಟೆ ಇವರು ಸೋಂಪುರ ಹೋಬಳಿ ಯಿಂದ 100 ಕ್ವಿಂಟಾಲ್ ಅಕ್ಕಿ ನೀಡುತ್ತೇವೆ ಎಂದರು.
15. ಶ್ರೀ ಸೋಮಣ್ಣನವರು, ಹುಲಿಕುಂಟೆ (ಸ್ವಾತಿ ಪೆಟ್ರೋಲ್ ಬಂಕ್) 100 ಕ್ವಿಂಟಾಲ್ ಬೆಲ್ಲ ನೀಡುವುದಾಗಿ ತಿಳಿಸಿದರು.
16. ಉಲ್ಲಾಳು ಶ್ರೀ ಪರಮಶಿವಯ್ಯನವರು, ಒಂದು ಕೊಪ್ಪಲು ಜವಾಬ್ದಾರಿ ಹಾಗೂ ಶ್ರೀಮಠದ ಸೇವಾ ಕಾರ್ಯಕ್ಕೆ 500 ಮಕ್ಕಳನ್ನು ಕಳುಹಿಸುತ್ತೇನೆ, ಜೊತೆಗೆ ಶ್ರೀಮಠದಲ್ಲಿರುವ ಅಂಧ ಮಕ್ಕಳಿಗೆ ಸಮವಸ್ತ್ರ ನೀಡುತ್ತೇವೆ ಎಂದರು.
17. ಶ್ರೀ ಬಸವರಾಜು, ಕೈಗಾರಿಕೋದ್ಯಮಿ, ಬೆಂಗಳೂರು,

ಇವರು 50 ಕ್ವಿಂಟಾಲ್ ಸಕ್ಕರೆ ನೀಡುತ್ತೇವೆ ಎಂದರು.

18. ಶ್ರೀ ರುದ್ರೇಶ್ (ಖೇಣಿ ಗ್ರೂಫ್), ಬೆಂಗಳೂರು, ಇವರು ಒಂದು ದಿನದ ಸಿಹಿ ಬೂಂದಿಗೆ ಹಣ ನೀಡುತ್ತೇವೆ ಎಂದರು.

19. ಶ್ರೀ ಜಗದೀಶ್ ಮತ್ತು ಶ್ರೀ ಅನಿಲ್‌ಕುಮಾರ್, ಉಲ್ಲಾಳು ಇವರು 50 ಟಿನ್ ತುಪ್ಪ ನೀಡುತ್ತೇವೆ ಎಂದರು.

20. ಶ್ರೀ ಪಿ.ಹೆಚ್. ರಾಜು, ಪುರುಷನಹಳ್ಳಿ (ರವಿಕುಮಾರ್ ಆರ್ಟ್ಸ್) ಪ್ರಚಾರಕ್ಕೆ 50 ಸಾವಿರ ಪೋಸ್ಟರ್‌ಗಳನ್ನು ಮಾಡಿ ಕೊಡುತ್ತೇವೆ ಎಂದರು.

21. ಶ್ರೀ ಜಗದೀಶ್ ಮತ್ತು ಶ್ರೀ ಬಸವರಾಜು, ನೆಲಮಂಗಲ ಇವರು ಈಗಾಗಲೇ ಪರಮಪೂಜ್ಯರ ಅಭಿನಂದನಾ ಗ್ರಂಥ ಸಿದ್ಧಶ್ರೈಲಕ್ಕೆ 5 ಲಕ್ಷ ನೀಡಿದ್ದೇವೆ. ದಾಸೋಹಕ್ಕಾಗಿ ತಲಾ ಒಂದು ಲಕ್ಷ ನೀಡುತ್ತೇವೆ ಎಂದರು.

22. ಶ್ರೀ ಹೊನ್ನಪ್ಪನವರು, ಬೈಂಡಹಳ್ಳಿ, ಇವರ ಊರಿನ ಪರವಾಗಿ 50 ಕ್ವಿಂಟಾಲ್ ಬೆಲ್ಲ ನೀಡುತ್ತೇವೆ ಎಂದರು.

23. ಶ್ರೀ ಗುರುಪ್ರಸಾದ್, ಹಾರೋಕ್ಯಾತನಹಳ್ಳಿ ಇವರು, 20 ಕ್ವಿಂಟಾಲ್ ಕಡ್ಲೆ, 20 ಕ್ವಿಂಟಾಲ್ ಗೋಧಿ ನೀಡುತ್ತೇವೆ ಎಂದರು.

24. ಪೂಜ್ಯ ಶ್ರೀ ದೇಗುಲಮಠದ ಸ್ವಾಮಿಗಳು ಒಂದು ಕೊಪ್ಪಲ ವ್ಯವಸ್ಥೆ ಮತ್ತು ದಾಸೋಹಕ್ಕಾಗಿ ಒಂದು ಲಕ್ಷ ನೀಡುತ್ತೇವೆ ಎಂದರು.

25. ದಿನಾಂಕ 25-12-2008ರಂದು ನಡೆದ ಸಭೆಯಲ್ಲಿ ತುಮಕೂರಿನ ಶ್ರೀ ಸಿದ್ಧಾರ್ಥ ಮೆಡಿಕಲ್ ಕಾಲೇಜಿನ ಅಧ್ಯಕ್ಷರಾದ ಶ್ರೀ ಶಿವಪ್ರಸಾದ್‌ರವರು ನಾವು ಬರುವ ಭಕ್ತಾಧಿಗಳ ಆರೋಗ್ಯ ವ್ಯವಸ್ಥೆ ನೋಡಿಕೊಳ್ಳುತ್ತೇವೆ ಜೊತೆಗೆ ಬೆಲ್ಲಕ್ಕೆ 2 ಲಕ್ಷ ರೂಗಳನ್ನು ನೀಡುತ್ತೇವೆ ಎಂದರು.

26. ಬೆಂಗಳೂರಿನ ಹಾಲು ಡೈರಿ ಒಕ್ಕೂಟದ ಅಧ್ಯಕ್ಷರಾದ ಶ್ರೀ ತಿಮ್ಮರಾಜು ರವರು ಪೂಜ್ಯರ ಶತಮಾನೋತ್ಸವ ಸಮಾರಂಭದ ದಾಸೋಹಕ್ಕಾಗಿ ಮಜ್ಜಿಗೆ ಪ್ಯಾಕೇಟ್‌ಗಳನ್ನು ಹಾಗೂ ಬೇಕಾಗುವಷ್ಟು ಹಾಲನ್ನು ನೀಡುತ್ತೇವೆ ಎಂದರು.

27. ಶ್ರೀ ಮುಸ್ತಾಕ್ ಅಹಮದ್, ತುಮಕೂರು ಜಿಲ್ಲಾ ವಕ್ಫ್ ಸಂಸ್ಥೆಯ ಮುಖ್ಯಸ್ಥರು, ಶ್ರೀಯುತರು ತುಮಕೂರು ಜಿಲ್ಲೆಯಲ್ಲಿರುವ ಎಲ್ಲಾ ಮಸೀದಿಗಳಿಗೆ, ದರ್ಗಾಗಳಿಗೆ, ನಮ್ಮ ಸಮಿತಿಯ ವತಿಯಿಂದ ಆಹ್ವಾನ ಪತ್ರಿಕೆ ಕಳುಹಿಸುತ್ತೇವೆ ಜಗತ್ತಿನಲ್ಲಿರುವ ಈ ಧರ್ಮದ ಪ್ರಮುಖ ರನ್ನು ನಮ್ಮ ಸಮಿತಿಯಿಂದ ಆಹ್ವಾನಿಸುತ್ತೇವೆ ಎಂದರು.

28. ತುಮಕೂರಿನ ಶ್ರೀಮತಿ ಶಿವಲಿಂಗಮ್ಮನವರು ನಮ್ಮ ಮಹಿಳಾ ಸಂಘದ ವತಿಯಿಂದ ಗೋಧಿ, ರವೆ ಉರಿಯುವ ಹಾಗೂ ತರಕಾರಿ ಹಚ್ಚುವ ಕಾರ್ಯದಲ್ಲಿ ತೊಡಗಿಸಿ ಕೊಳ್ಳುತ್ತೇವೆ ಎಂದರು.

29. ತುಮಕೂರಿನ ಶ್ರೀ ಶಾರದ ಮಹಿಳಾ ಬ್ಯಾಂಕ್ ಅಧ್ಯಕ್ಷಿಣಿಯವರು ನಮ್ಮ ಬ್ಯಾಂಕ್ ವತಿಯಿಂದ ಎರಡು ಟಾಯ್‌ಲೆಟ್ ರೂಂಗಳನ್ನು ಕಟ್ಟಿಸಿಕೊಡುತ್ತೇವೆ ಎಂದರು.

30. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾದ ಸನ್ಮಾನ್ಯ ಶ್ರೀ ಟಿ.ಕೆ. ನಂಜುಂಡಪ್ಪನವರು ಒಂದು ಲಕ್ಷ ರೂಗಳನ್ನು ಪ್ರಸಾದದ ವ್ಯವಸ್ಥೆಗೆ ನೀಡುತ್ತೇವೆ ಎಂದರು.

31. ತುಮಕೂರಿನ ಉದ್ಯಮಿಗಳಾದ ಶ್ರೀ ಟಿ.ಎಂ. ಸ್ವಾಮಿಯವರು ದಾಸೋಹಕ್ಕಾಗಿ ನೂರ ಒಂದು ಕ್ವಿಂಟಾಲ್ ಸಕ್ಕರೆಯನ್ನು ನೀಡುವುದಾಗಿ ವಾಗ್ದಾನ ಮಾಡಿದರು.

32. ಚೇಳೂರು ಹೋಬಳಿಯ ನೆಲ್ಲೂರು ಗ್ರಾಮದ ಹಾಲು ಒಕ್ಕೂಟದವರು 50 ಕ್ಯಾನ್ ಹಾಲನ್ನು ನೀಡುವುದಾಗಿ ತಿಳಿಸಿದರು.

33. ತುಮಕೂರಿನ ಕೈಗಾರಿಕೋದ್ಯಮಿಯವರಾದ ಶ್ರೀ ಜಗನ್ನಾಥ್ 10008/-ರೂಗಳನ್ನು ಹಾಗೂ ಕೆಲಸ ಕಾರ್ಯಕ್ಕೆ ಒಂದು ಟ್ರಾಕ್ಟರ್ ಮತ್ತು ವಸತಿಗಾಗಿ ಭೀಮ ಸಂದ್ರದಲ್ಲಿರುವ ನಮ್ಮ ಛತ್ರವನ್ನು ಬಿಟ್ಟುಕೊಡುತ್ತೇವೆ ಎಂದರು.

ದಿನಾಂಕ 30-12-2008ರಂದು ಶ್ರೀಮಠದಲ್ಲಿ ಅಧ್ಯಯನ ಮಾಡಿ ಪ್ರಸ್ತುತ 50 ಕ್ಕೂ ಹೆಚ್ಚು ಮಠಗಳಲ್ಲಿ ಸೇವೆ ಸಲ್ಲಿಸುತ್ತಿರುವ ಪೂಜ್ಯ ಸ್ವಾಮೀಜಿಯವರು ಸಭೆ ಸೇರಿ ಶತಮಾನೋತ್ಸವ ಸಂದರ್ಭದಲ್ಲಿ ನಡೆಯುವ 22 ಪ್ರಸಾದ ನಿಲಯಗಳಲ್ಲಿ ತಲಾ ಇಬ್ಬರಂತೆ ಜವಾಬ್ದಾರಿ ಹೊತ್ತು ದಾಸೋಹ ವ್ಯವಸ್ಥೆ ಮಾಡುತ್ತೇವೆ. ಜೊತೆಗೆ ನಮ್ಮ ಮಠಗಳಲ್ಲಿರುವ ದಾಸೋಹ ಪರಿಕರಗಳನ್ನು ನೀಡುತ್ತೇವೆ ಎಂದರು. ನಾವೆಲ್ಲ ಒಟ್ಟಾಗಿ ಸೇರಿ ಈ ಮಂಗಳ ಮಹೋತ್ಸವದಲ್ಲಿ ಗುರುಗಳಿಗೆ ನೆನಪಿನ ಕಾಣಿಕೆಯನ್ನು ನೀಡಬೇಕೆಂದು ಸಂಕಲ್ಪ ಮಾಡಿದರು.

ಪರಮಪೂಜ್ಯ ಶ್ರೀಗಳವರು ಆಶೀರ್ವಚನ ನೀಡಿ, ಈ ಸಭೆಯನ್ನು ಸೇರಿಸಿರುವ ಉದ್ದೇಶ ತಪ್ಪಾಗಿ ತಿಳಿಯಬಾರದು, ಕೊಡುವ ಪುಣ್ಯಾತ್ಮರು ಬೇಕಾದಷ್ಟು ಭಕ್ತರಿದ್ದಾರೆ. ನಿಮ್ಮ ಜವಾಬ್ದಾರಿ ಪ್ರಸಾದಕ್ಕೆ ವ್ಯವಸ್ಥೆ ಮಾಡುವುದು. ಒಂದು ಸಾವಿರಕ್ಕೂ ಹೆಚ್ಚು ಅಡುಗೆಯವರನ್ನು ಕರೆತರುವುದು, ಅವರು ಸೇವಾರೂಪದಲ್ಲಿಯಾದರೂ ಮಾಡಲಿ ಅಥವಾ ಹಣ ತೆಗೆದುಕೊಂಡಾದರೂ ಮಾಡಲಿ ಮುಖ್ಯವಾಗಿ ಈ ಕಾರ್ಯಕ್ರಮದಲ್ಲಿ ಗಮನ ಕೊಡಬೇಕಾದ ಅಂಶಗಳೆಂದರೆ, ಪ್ರಸಾದ ವ್ಯವಸ್ಥೆ, ಕುಡಿಯುವ ನೀರಿನ ವ್ಯವಸ್ಥೆ, ನೈರ್ಮಲ್ಯ ಹಾಗೂ ವಸತಿ ಇಷ್ಟು ಮುಖ್ಯವಾದವುಗಳು ಎಂದು ತಿಳಿಸಿದರು.

ಸಂಗ್ರಹ: ಶ್ರೀ ಡಿ.ಎಸ್. ನಾಗರಾಜು, ಮು.ಶಿ.
ಶ್ರೀ ಸಿದ್ಧಗಂಗಾ ಮಠ





## ಕನಕರನ್ನು ಕುರಿತು

ಕನಕದಾಸರ ಕಾವ್ಯಾಮೃತವು
ಬೆನಕನ ಭಾಗ್ಯದ ದಿವ್ಯ ಸುಕೃತವು
ಕಾವ್ಯ ಪರಂಪರೆ ಹರಿದಿರೆ ನಿರಂತರ
ಹರಿನಾಮಾಮೃತ ಸಂಕೀರ್ಣದ ಸಿರಿಯಲಿ

ಹರಿಭಕ್ತಿಸಾರವೆಂಬ ಸಾಗರಡಲ್ಲಿ
ಮೋಹನತರಂಗಿಣಿಯ ಮೋಹದಲ್ಲಿ
ರಾಮಧಾನ್ಯ ಚರಿತ್ರೆಯ ಪವಿತ್ರತೆಯಲಿ
ಭಾಮಿನಿ ಷಟ್ಪದಿಯ ಭವ್ಯ ಬುನಾದಿಯಲಿ

ನಾನು ಹೋದರೆ ಹೋದೇನು ಇಲ್ಲದಿದ್ದರೆ ಇಲ್ಲ
ನೆಚ್ಚದಿರು ಸಂಸಾರ ನೆಲೆ ಇಲ್ಲದೀಕಾಯ
ಆವಬಲವಿದ್ದರೇನು ದೈವಬಲವಿಲ್ಲದವಗೆ
ಎಲ್ಲರು ಮಾಡುವುದು ಹೊಟ್ಟೆಗಾಗಿ
ಶ್ರೀಹರಿಯ ಕೃಪೆಯಿಂದಲ್ಲದೆ ಕಡ್ಡಿಯೂ ಅಲುಗದು.

ನೀ ಮಾಯೆಯೊಳಗೊ ನಿನ್ನೊಳು
ಮಾಯೆಯೋ

ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ
ದೀನ ನಾನು ಸಮಸ್ತಲೋಕಕೆ ದಾನಿ ನೀನು
ನಳ ಚರಿತ್ರೆಯಂಥ ಬೃಹತ್ ಕಾವ್ಯಗಳ ನೀಡಿದ
ಉಡುಪಿಯ ಶ್ರೀಕೃಷ್ಣನನು ತನ್ನ ಕಡೆಗೆ
ತಿರುಗಿಸಿ ಅನನ್ಯ ಭಕ್ತಿಯ ಪ್ರಭೆ ಬೀರಿದ
ಸಂತ ಕೀರ್ತನ ವರಕವಿ ಕನಕದಾಸರು
ಕನ್ನಡ ಮಾತೆಯ ಕರುಣೆಯ ಕಣ್ಮಣಿ ಕವಿರತ್ನ.

ಕನಕದಾಸರ ಕಾವ್ಯ ವೃಷ್ಠಿ
ಬೆನಕನ ಭಾಗ್ಯದ ಭಾವ ಪುಷ್ಟಿ
ಕನ್ನಡ ನುಡಿಗೆ ನೀಡಿದ ದೃಷ್ಟಿ
ಚೆನ್ನದ ನಾಡಿನ ಚೆಲುಮೆಯ ಸೃಷ್ಟಿ.

-ತು.ಮ. ಬಸವರಾಜು

## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ

ಅಧ್ಯಾಯ -೬

### ಮಕ್ಕಳ ಭಾಗ್ಯ

ಪಡೆಯತಕ್ಕ ಭಾಗ್ಯವದು, ಅರಿವುಳ್ಳ ಮಕ್ಕಳನು
ಪಡೆವುದು;
ಇದಲ್ಲದ ಅನ್ಯಭಾಗ್ಯವನು ನಾವು ಗಣಿಸೆವು.

ಏಳು ಜನ್ಮಗಳಲೂ ದುಃಖವಿರದು, ನಿಂದೆಯಿಲ್ಲದ
ಸದ್ಗುಣದ ಮಕ್ಕಳನು ಪಡೆದರೆ.

ತಮ್ಮ ಸಿರಿಯೆಂಬರು ತಮ್ಮ ಮಕ್ಕಳನು; ಆ ಸಿರಿಯೂ
ತಮ್ಮ ತಮ್ಮ ಕರ್ಮದಿಂದ ಬರುವುದು.

ಅಮೃತಕಿಂತ ಅತಿ ಮಧುರ, ತಮ್ಮ ಮಕ್ಕಳ
ಕಿರುಗೈಯಿಂದ ಕಲಸಿದಶನ.

ಮಕ್ಕಳ ಮೈಮುಟ್ಟುವುದು, ಸುಖ ಮೈಯ್ಯಿಗೆ;
ಮತ್ತವರ ನುಡಿಯನಾಲಿಸುವುದು ಸುಖ ಕಿವಿಗೆ

ಕೊಳಲಿಂಪು ವೀಣೆಯಿಂಪೆಂಬರು, ತಮ್ಮ ಮಕ್ಕಳ
ತೊದಲ್ನುಡಿಯನು ಕೇಳದವರು.

ತಂದೆ ಮಗನಿಗೆ ಮಾಡುವ ನೆರವು, ಬಲ್ಲಿದರ
ಸಭೆಯೊಳು
ಮೊದಲಿಗನಾಗಿರುವಂತೆ ಮಾಡುವುದು.

ತಮ್ಮ ಮಕ್ಕಳ ಮತಿವಂತಿಕೆಯು ತಮಗಿಂತಲೂ
ಈ ಜಗದ ಜನಕೆಲ್ಲ ಸುಖವ ತರುವುದು.

ಹೆತ್ತ ಹೊತ್ತಿಗಿಂತ ಹೆಚ್ಚಾಗಿ ನಲಿವಳು, ತನ್ನ ಮಗನ
ಜನ ಪ್ರಾಜ್ಞನೆಂದುದನು ಕೇಳ್ದ ತಾಯಿ.

ಮಗನು ತಂದೆಗೆ ಮಾಡುವ ನೆರವು 'ಇವನ ತಂದೆ
ಇವನ ಪಡೆಯಲು ಏನು ತಪಗೆಯ್ದನೋ' ಎಂಬ ನುಡಿ.

# ೨೦೦೯ನೇ ವರ್ಷದ ಬಸವಾದಿ ಶರಣರ ಸ್ಮರಣೋತ್ಸವಗಳು

| | | |
|---|---|---|
| 1) ಜನವರಿ ೧೧– ರವಿವಾರ | ಬನದ ಹುಣ್ಣಿಮೆ | ಮೇದಾರ ಕೇತಯ್ಯ |
| 2) ಜನವರಿ ೧೪– ಬುಧವಾರ | ಸಂಕ್ರಮಣ | ಸಿದ್ಧರಾಮೇಶ್ವರ |
| 3) ಜನವರಿ ೨೬– ಸೋಮವಾರ | ಅವರಾತ್ರಿ ಅಮವಾಸ್ಯೆ | ಜೇಡರ ದಾಸಿಮಯ್ಯ |
| 4) ಫೆಬ್ರವರಿ ೯ – ಸೋಮವಾರ | ಭಾರತ ಹುಣ್ಣಿಮೆ | ಕಿನ್ನರಿ ಬೊಮ್ಮಯ್ಯ |
| 5) ಫೆಬ್ರವರಿ ೨೩– ಸೋಮವಾರ | ಮಹಾಶಿವರಾತ್ರಿ | ಡೋಹರ ಕಕ್ಕಯ್ಯ |
| 6) ಮಾರ್ಚ್ ೧೧– ಬುಧವಾರ | ಹೋಳಿ ಹುಣ್ಣಿಮೆ | ಬಿಬ್ಬಿ ಬಾಚಯ್ಯ |
| 7) ಮಾರ್ಚ್ ೨೭– ಶುಕ್ರವಾರ | ಯುಗಾದಿ ಪಾಡ್ಯ | ಅಲ್ಲಮಪ್ರಭು |
| 8) ಏಪ್ರಿಲ್ ೯ – ಗುರುವಾರ | ದವನದ ಹುಣ್ಣಿಮೆ | ಅಕ್ಕಮಹಾದೇವಿ |
| 9) ಏಪ್ರಿಲ್ ೨೭– ಸೋಮವಾರ | ಅಕ್ಷಯ ತೃತೀಯ | ಬಸವಣ್ಣನವರು |
| 10) ಮೇ ೨೪ – ರವಿವಾರ | ಹೋಳಿ ಹುಣ್ಣಿಮೆ | ಬಿಬ್ಬಿ ಬಾಚಯ್ಯ |
| 11) ಜೂನ್ ೩– ರವಿವಾರ | ಬಾದಾಮಿ ಅಮಾವಾಸ್ಯೆ | ಕುರುಬ ಗೊಲ್ಲಾಳ |
| 12) ಜುಲೈ ೭ – ಮಂಗಳವಾರ | ಕಡ್ಲಿಗಡಬ ಹುಣ್ಣಿಮೆ | ಹಡಪದ ಅಪ್ಪಣ್ಣ |
| 13) ಜುಲೈ ೨೬– ರವಿವಾರ | ನಾಗಪಂಚಮಿ | ಅಕ್ಕನಾಗಮ್ಮ |
| 14) ಆಗಸ್ಟ್ ೯ – ಗುರುವಾರ | ನೂಲಹುಣ್ಣಿಮೆ | ನುಲಿಯ ಚಂದಯ್ಯ |
| 15) ಆಗಸ್ಟ್ ೨೩– ರವಿವಾರ | ಗಣೇಶ ಚೌತಿ | ಮಡಿವಾಳ ಮಾಚಿದೇವ |
| 16) ಸೆಪ್ಟೆಂಬರ್೨೩– ರವಿವಾರ | ಮಹಾನವಮಿ | ಹರಳಯ್ಯ ಮಧುವಯ್ಯ |
| 17) ಸೆಪ್ಟೆಂಬರ್೨೮– ಸೋಮವಾರ | ವಿಜಯದಶಮಿ | ಕಲ್ಯಾಣಕ್ರಾಂತಿ ವಿಜಯ |
| 18) ಅಕ್ಟೋಬರ್೪ – ರವಿವಾರ | ಶೀಗೆ ಹುಣ್ಣಿಮೆ | ಗಂಗಾಂಬಿಕೆ |
| 19) ಅಕ್ಟೋಬರ್ ೧೯ – ಸೋಮವಾರ | ದೀಪಾವಳಿ ಪಾಡ್ಯ | ಚೆನ್ನಬಸವಣ್ಣ |
| 20) ನವೆಂಬರ್ ೨– ಸೋಮವಾರ | ಗೌರಿ ಹುಣ್ಣಿಮೆ | ನೀಲಾಂಬಿಕೆ |
| 21) ಡಿಸೆಂಬರ್ ೨– ಬುಧವಾರ | ಹೊಸ್ತಿಲ ಹುಣ್ಣಿಮೆ | ಮಾದಾರ ಚೆನ್ನಯ್ಯ |
| 22) ಡಿಸೆಂಬರ್ ೧೬– ಬುಧವಾರ | ಎಳ್ಳ ಹೊಸ್ತಿಮೆ | ಒಕ್ಕಲಿಗ ಮುದ್ದಣ್ಣ |
| 23) ಡಿಸೆಂಬರ್ ೩೧– ಗುರುವಾರ | ಬನದ ಹುಣ್ಣಿಮೆ | ಮೇದಾರ ಕೇತಯ್ಯ |

ವಿಶೇಷ ಸ್ಮರಣೋತ್ಸವಗಳು

| | |
|---|---|
| ಫೆಬ್ರವರಿ ೧೮ – ಬುಧವಾರ | ಶರಣ ಹರ್ಡೇಕರ ಮಂಜಪ್ಪನವರು |
| ಜುಲೈ ೨ – ಗುರುವಾರ | ಶರಣ ಫ.ಗು. ಹಳಕಟ್ಟಿಯವರು |
| ಅಕ್ಟೋಬರ್ ೨೮ – ಬುಧವಾರ | ಶರಣ ಉತ್ತಂಗಿ ಚೆನ್ನಪ್ಪನವರು |

ಸಂಗ್ರಹ : ಪ್ರೊ. ಸಿದ್ಧಣ್ಣ ಲಂಗೋಟಿ(ಚಾಂದಶವತೆ)
ಗೌರವ ಸಂಪಾದಕರು, ಬಸವ ಬೆಳಗು ಪತ್ರಿಕೆ
ರಾಮದುರ್ಗ-೫೯೧೧೨೩, ಬೆಳಗಾವಿ ಜಿಲ್ಲೆ.





# ಸೂರ್ಯಪಾನ

ಕೃಪೆ : ಸುಧಾ ವಾರಪತ್ರಿಕೆ

**ಸೂರ್ಯಶಕ್ತಿ ಮಾರ್ಪಾಡು ಹೇಗೆ?**

ಸೂರ್ಯಕಿರಣವನ್ನು ನಾವು ಕಣ್ಣಿನ ಮೂಲಕ ನೋಡಿದಾಗ, ಅದು ದೇಹಕ್ಕೆ ಶಕ್ತಿಯಾಗಿ ಹೇಗೆ ಮಾರ್ಪಾಡಾಗುತ್ತದೆ ಎಂಬುದಕ್ಕೆ ಮೂರು ಪ್ರಧಾನವಾದ ವಾದಗಳು ಕಂಡು ಬರುತ್ತದೆ.

ಮೊದಲನೆಯ ವಾದ ಸೂರ್ಯಪಾನದ ತಂತ್ರಜ್ಞಾನವನ್ನು ಪ್ರಪಂಚಕ್ಕೆ ಪರಿಚಯಿಸಿದ ಹೀರಾ ರತನ್ ಮಾನೆಕ್ ಅವರದು. ಅವರ ಪ್ರಕಾರ ದೇಹವನ್ನು ಕಟ್ಟಿರುವ ಜೀವಕಣಗಳು ಕಿರಣವನ್ನು ಶಕ್ತಿಯನ್ನಾಗಿ ಪರಿವರ್ತಿಸಬಲ್ಲ 'ಫೋಟೋವಾಲ್ಟಿಕ್' ಗುಣವನ್ನು ಹೊಂದಿದೆ. ನಾವು ಸೂರ್ಯಪಾನದ ಮೂಲಕ ಜೀವಕಣಗಳಿಗೆ ಅದರ ಈ ಗುಣದ ಮರುಪರಿಚಯ ಮಾಡಿಸುತ್ತೇವೆ. ಹಾಗಾಗಿ ಜೀವಕಣಗಳು ಸೂರ್ಯಶಕ್ತಿಯನ್ನು ದೇಹಕ್ಕೆ ಬೇಕಾದ ಶಕ್ತಿಯನ್ನಾಗಿ ಪರಿವರ್ತಿಸಲು ಆರಂಭಿಸುತ್ತವೆ. ಮನುಷ್ಯ ತನ್ನ ಮೆದುಳಿನ ಶಕ್ತಿಯ ಅತಿ ಸಣ್ಣ ಭಾಗವನ್ನು (ಶೇಕಡ 10) ಮಾತ್ರ ಉಪಯೋಗಿಸುತ್ತಾನೆ. ಸೂರ್ಯಪಾನದ ಮೂಲಕ ಮೆದುಳಿನ ಶಕ್ತಿಯ ಸರಿಯಾದ ಹಾಗೂ ಹೆಚ್ಚಿನ ಉಪಯೋಗಕ್ಕೆ ಕಾರಣವಾಗುತ್ತದೆ. ಕಣ್ಣಿನ ಮೂಲಕ ಮೆದುಳಿಗೆ ಹಾಗೂ ದೇಹಕ್ಕೆ ತಲುಪುವ ಸೂರ್ಯಕಿರಣಗಳು ಬಹಳ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತವೆ. ಮಾನೇಕ್ ಅವರ ಪ್ರಕಾರ ಪ್ರತಿದಿನ ಸೂರ್ಯಪಾನ ಮಾಡುವುದರಿಂದ ಕಣ್ಣಿನ ದೋಷಗಳು ನಿವಾರಣೆಯಾಗುತ್ತವೆ. ದೇಹದ ಕಾಯಿಲೆಗಳು ವಾಸಿಯಾಗುತ್ತವೆ ಹಾಗೂ ಮಾನಸಿಕವಾಗಿ ವ್ಯಕ್ತಿ ಉತ್ತಮನಾಗುತ್ತಾನೆ.

ಎರಡನೆಯ ವಾದ ಮಾನೇಕ್ ಅವರನ್ನು ಪರೀಕ್ಷೆಗೆ ಗುರಿ ಮಾಡಿದ್ದ ಅಹಮದಾಬಾದಿನ ಡಾ. ಸುಧೀರ್ ಷಾ ಅವರದು. ಸೂರ್ಯಪಾನದ ಪ್ರತ್ಯಕ್ಷ ಪ್ರಮಾಣವಾದ ಮಾನೇಕ್ ಅವರನ್ನು 411 ದಿನಗಳ ಕಾಲ ವೈದ್ಯಕೀಯ ನಿರೀಕ್ಷೆಯಲ್ಲಿರಿಸಿದಾಗ ಅವರು ಯಾವುದೇ ಆಹಾರವನ್ನು ಸೇವಿಸುತ್ತಿಲ್ಲ ಎಂಬುದು ಖಚಿತವಾಗಿತ್ತು ಹಾಗೂ ಅವರು ಈ ನಿರಾಹಾರದಿಂದಾಗಿ ಯಾವುದೇ ನಿಶ್ಶಕ್ತಿಕೆ ಗುರಿಯಾಗಿರಲಿಲ್ಲ. ಅವರು ತಮ್ಮ ಎಂದಿನ ಚಟುವಟಿಕೆಯಲ್ಲಿ ನಿರತರಾಗಿದ್ದರು.

ಡಾ|| ಷಾ ಅವರ ಪ್ರಕಾರ, ಮನುಷ್ಯನ ಮೆದುಳಿನಲ್ಲಿ ಅತಿ ಚಿಕ್ಕ ಗಾತ್ರದ ಮೂರನೆಯ ಕಣ್ಣು ಎಂದು ಕರೆಯುವ 'ಫೈನಿಯಲ್ ಗ್ಲಾಂಡ್' ಈ ಪ್ರಕ್ರಿಯೆಗೆ ಕಾರಣ. ಒಂದು ಬಟಾಣಿ ಗಾತ್ರದ ( CAT Scan ಮಾಡಿದಾಗ ಇದರ ಸಾಧಾರಣ ಗಾತ್ರ 5 ಮಿಲಿಮೀಟರ್–6 ಮಿಲಿಮೀಟರ್ ಎಂದು ಸಾಬೀತಾಗಿದೆ) ಸುಮಾರು 0.1 ಗ್ರಾಂ ತೂಕದ ವಿಕಾಸದ ಪಳೆಯುಳಿಕೆ ಎನಿಸಿಕೊಳ್ಳುವ ಮೆದುಳಿನ ಮಧ್ಯ ಭಾಗದಲ್ಲಿ ಭ್ರೂಮಧ್ಯೆ ಇರುವ ಪೈನಿಯಲ್ ಗ್ಲಾಂಡ್‌ನ ಬಗ್ಗೆ ವೈದ್ಯಕೀಯ ಕ್ಷೇತ್ರದಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಬಹಳ ದಿನಗಳವರೆಗೆ ಇದರ ಕೆಲಸವೇನು ಎಂಬುದು ವಿಜ್ಞಾನಿಗಳಿಗೆ ತಿಳಿದಿರಲಿಲ್ಲ. ವಿದ್ಯಾರ್ಥಿಗಳಲ್ಲಿ ಈಗ ಅನೇಕರು ಈ ಅಂಗ ದೇಹದ ಶಾಖ, ಆರ್ದ್ರತೆ ಇತ್ಯಾದಿ ಭೌತಿಕ ಸಂತುಲವನ್ನು ಕಾಪಾಡುವುದರ ಜತೆಗೆ ಅತೀಂದ್ರಿಯ ಜ್ಞಾನದಂತಹ ಅಭೌತಿಕ ಅರಿವನ್ನು ನೀಡುವ ಕೆಲಸ ಮಾಡುತ್ತದೆ ಎಂಬ ನಿರ್ಧಾರಕ್ಕೆ ಬಂದಿದ್ದಾರೆ.

ಡಾ|| ಷಾ ಅವರು ಈ ಅಂಗವನ್ನು ಫೋಟೋ ರಿಸೆಪ್ಟರ್ ಕಣಗಳನ್ನು ಹೊಂದಿರುವ ಅಂಗ ಎಂದು ಕರೆಯುತ್ತಾರೆ. ಹಾಗಾಗಿ ಅದನ್ನು ಕಿರಣಗಳಿಗೆ ಸ್ಪಂದಿರುವ ಅಂಗವಾಗಿ ಪರಿಗಣಿಸುತ್ತಾರೆ. ಯಾವ ರೀತಿ ಸಸ್ಯಗಳು ತಮ್ಮಲ್ಲಿರುವ ಕ್ಲೋರೋಫಿಲ್‌ನಿಂದ ಫೋಟೋಸಿಂಥೆಸಿಸ್ ಕ್ರಿಯೆಯಲ್ಲಿ ಭಾಗವಹಿಸಿ ಸಸ್ಯಕ್ಕೆ ಬೇಕಾದ ಶಕ್ತಿಯನ್ನು ನೀಡುತ್ತದೋ, ಹಾಗೆಯೇ ಸೂರ್ಯನನ್ನು ನೇರವಾಗಿ ಕಣ್ಣಿನ ಮೂಲಕ ನೋಡುವುದರಿಂದ ಪೈನಿಯಲ್ ಗ್ಲಾಂಡ್ ಇಂತಹ ಕೆಲಸವನ್ನು ಮಾಡುತ್ತಿರಬೇಕು ಎಂಬ ನಿರ್ಧಾರಕ್ಕೆ ಡಾ. ಷಾ ಬರುತ್ತಾರೆ. ಇದಕ್ಕೆ ಸಾಕ್ಷಿಯಾಗಿ ಮನೇಕ್ ಅವರ CAT Scan ಮಾಡಿದಾಗ ದೊರಕಿದ ಫಲಿತಾಂಶದ ಕಡೆ ನಮ್ಮ ಗಮನವನ್ನು ಸೆಳೆಯುತ್ತಾರೆ. ಮಾನೇಕ್ ಅವರ ಪೈನಿಯಲ್ ಗ್ಲಾಂಡ್‌ನ ಗಾತ್ರ 8 ಮಿಲಿಮೀಟರ್‌ನಿಂದ 11 ಮಿಲಿಮೀಟರ್. ಇದು ಇನ್ನಿತರ ಸೂರ್ಯಪಾನಿಗಳ CAT Scan ವರದಿಗಳಲ್ಲೂ ಕಾಣಿಸುತ್ತದೆ. ಆಧ್ಯಾತ್ಮಿಕವಾಗಿ ನೋಡುವುದೇ ಆದರೆ ಈ ಅಂಗವನ್ನೇ ಸಾಧಕರು ಅಜ್ಞಾನ ಚಕ್ರವೆಂದು ಕರೆಯುತ್ತಾರೆ.

ಮೂರನೆಯ ವಾದ ಆಧ್ಯಾತ್ಮದ ಮಾರ್ಗದಲ್ಲಿ ಸಾಧನೆ ನಡೆಸಿರುವ, ಅತೀಂದ್ರಿಯ ಶಕ್ತಿಯಿಂದ ಪಡೆಯುವ ಸಂಶೋಧಕಿ ಕತ್ರೀನಾ ರಾಫೆಲ್ ಅವರದು. ಆಕೆಯ ಪ್ರಕಾರ ಸೂರ್ಯನು ಆಧ್ಯಾತ್ಮಿಕ ಶಕ್ತಿ ಮತ್ತು ಭೌತಿಕ(ಬೆಳಕು) ಶಕ್ತಿಯ

ಸಂಗಮ. ಕಾಣಲಾಗದ್ದು ಎಂಬ ಶಕ್ತಿಯನ್ನು ಅವನೊಬ್ಬನ ಮೂಲಕವೇ ನಾವು ಕಾಣಬಲ್ಲೆವು. ಕುಂಡಲಿನೀ(ಚಕ್ರ)ಶಕ್ತಿಯನ್ನು ನಾವು ಸೂರ್ಯಪಾನದ ಮೂಲಕ ಉತ್ತೇಜಿಸುತ್ತೇವೆ. ಹಾಗಾಗಿ ದೇಹದ ಬಂಧನಗಳಾದ ಹಸಿವು, ಕಾಯಿಲೆಗಳನ್ನು ಎಂದೆಂದಿಗೂ ನಾವು ಸೂರ್ಯಪಾನದ ಮೂಲಕ ನಿವಾರಿಸಬಲ್ಲೆವು ಎನ್ನುತ್ತಾರೆ ಆಕೆ.

**ಯಾರು ಈ ಮಾನೇಕ್?**

ಹೀರಾ ರತೆನ್ ಮಾನೆಕ್ 1937ರ ಸೆಪ್ಟೆಂಬರ್ 12ರಂದು ಗುಜರಾತ್‌ನ ಬೋಧವಾಡದಲ್ಲಿ ಹುಟ್ಟಿದರು. ಆದರೆ ವರು ಬೆಳೆದಿದ್ದು ಕೇರಳದ ಕಲ್ಲಿಕೋಟೆಯಲ್ಲಿ. ಅವರು ಕಲ್ಲಿಕೋಟೆಯ ವಿಶ್ವವಿದ್ಯಾಲಯದಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ಪದವಿ ಪಡೆದರು. ನಂತರ ತಮ್ಮ ಕುಟುಂಬದ ಹಡಗು ವ್ಯಾಪಾರ ಸಂಸ್ಥೆಯನ್ನು ಸೇರಿಕೊಂಡರು. ನಿವೃತ್ತಿಯವರೆಗೂ ಅಲ್ಲೇ ಕೆಲಸ ಮಾಡಿದರು. ನಿವೃತ್ತಿಯ ನಂತರ ತಮ್ಮ ಬಾಲ್ಯದಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡಿದ್ದ, ಭಾರತೀಯ ಪುರಾತನ ಸಂಸ್ಕೃತಿಯಲ್ಲಿ ಪ್ರಧಾನವಾಗಿ ಉಲ್ಲೇಖಿತವಾಗಿದ್ದ, ಆದರೆ ಮರೆತುಹೋಗಿದ್ದ ಸೂರ್ಯಪಾನದ ಬಗ್ಗೆ ಸಂಶೋಧನೆಯನ್ನು ಆರಂಭಿಸಿದರು. ಮೂರು ವರ್ಷಗಳ ಕಾಲ ಸತತವಾಗಿ ಅಧ್ಯಯನ ನಡೆಸಿದ ನಂತರ ಅವರಿಗೆ ಸೂರ್ಯಪಾನದ ತಂತ್ರ ಕೈಗೂಡಿತು. 2600 ವರ್ಷಗಳ ಹಿಂದೆ ಭಗವಾನ್ ಮಹಾವೀರರು ಸೂರ್ಯಪಾನವನ್ನು ಸಿದ್ಧಿಸಿಕೊಂಡಿದ್ದರು ಎಂಬುದು ಅವರ ಆಸಕ್ತಿಗೆ ಮೂಲ ಕಾರಣವಾಗಿತ್ತು. ಈಜಿಪ್ಷನ್ನರು ಮತ್ತು ಅಮೆರಿಕೆಯ ಮೂಲನಿವಾಸಿಗಳೂ ಈ ತಂತ್ರವನ್ನು ತಿಳಿದಿದ್ದರು ಎಂಬುದು ಅವರ ಆಸಕ್ತಿಯನ್ನು ಕೆರಳಿಸಿತ್ತು.

18ಜೂನ್ 1995ರಿಂದ ಮಾನೇಕ್‌ರವರು ಸೂರ್ಯನ ಶಕ್ತಿ ಹಾಗೂ ನೀರನ್ನಲ್ಲದೆ ಬೇರಾವ ಆಹಾರವನ್ನೂ ದೇಹದ ಶಕ್ತಿಗಾಗಿ ಆಧರಿಸಿಲ್ಲ. ಈ ಸಂದರ್ಭದಲ್ಲಿ ಇವರು ಅನೇಕ ವೈದ್ಯಕೀಯ ಪರೀಕ್ಷೆಗಳಿಗೆ ತಮ್ಮ ದೇಹವನ್ನು ಗುರಿಪಡಿಸಿಕೊಂಡಿದ್ದಾರೆ. ಅದರಲ್ಲಿ ಪ್ರಧಾನವಾದುವು ಮೂರು.

ಮೊದಲನೆಯ ಪರೀಕ್ಷೆ 1995-96ರಲ್ಲಿ ಕಲ್ಲಿಕೋಟೆಯಲ್ಲಿ ನಡೆದ 211 ದಿನಗಳ ನಿಟ್ಟುಪವಾಸ. ಇದನ್ನು ಡಾ॥ ಸಿ.ಕೆ. ರಾಮಚಂದ್ರ ಎಂಬ ವೈದ್ಯರ ನಿರೀಕ್ಷೆಯಲ್ಲಿ ನಡೆಸಲಾಯಿತು. ನಂತರ 2000-01ರಲ್ಲಿ ಡಾ॥ ಸುಧೀರ್ ಷಾ ಅವರ ನಿರೀಕ್ಷೆಯಲ್ಲಿ ನಡೆದ 411 ದಿನಗಳ ವೈದ್ಯಕೀಯ ಪರೀಕ್ಷೆ ಅಂತರ್‌ರಾಷ್ಟ್ರೀಯ ಗಮನ ಸೆಳೆಯಿತು. ಈ ನಿರೀಕ್ಷೆಯ ವೇಳೆ ವೈದ್ಯರಾದ ಡಾ॥ ಷಾ ಮತ್ತು ಡಾ॥ ಮೌರಿ ಪ್ರೆಸ್‌ಮನ್ ಸಹ ನಿರೀಕ್ಷೆಯಲ್ಲಿ ಭಾಗವಹಿಸಿದ್ದರು. ಈ ಅಹಮದಾಬಾದ್‌ನ ಪರೀಕ್ಷೆ ಅಂತರ್‌ರಾಷ್ಟ್ರೀಯ ಮಟ್ಟದ ಗಮನ ಸೆಳೆದಾಗ ಅಮೆರಿಕೆಯ ಥಾಮಸ್ ಜೆಫರ್‌ಸನ್ ವಿಶ್ವವಿದ್ಯಾಲಯ ಹಾಗೂ ಫಿಲಿಡೆಲ್ಫಿಯಾದ ವಿಶ್ವವಿದ್ಯಾಲಯಗಳು ಮಾನೆಕ್ ಅವರನ್ನು ಆಹ್ವಾನಿಸಿದವು. ಅಲ್ಲಿ 130 ದಿನಗಳ ಪರೀಕ್ಷೆಯನ್ನು ಡಾ॥ ಆಂಡ್ರ್ಯೂ ನ್ಯೂಬರ್ಗ್ ಅವರ ನೇತೃತ್ವದಲ್ಲಿ ವೈದ್ಯರ ತಂಡ ಮಾಡಿತು. ಇದರಲ್ಲಿ ಪೈನಿಯಲ್ ಗ್ಲಾಂಡ್‌ನ ಬಗ್ಗೆ ಪ್ರಧಾನ ಸಂಶೋಧನೆ ನಡೆಸಿರುವ ಡಾ॥ ಜಾರ್ಜ್ ಬರ್ನಾರ್ಡ್ ಸಹ ಇದ್ದರು.

ಈ ಪರೀಕ್ಷೆ ಬಹಳ ವಿಸ್ತೃತವಾದ ಪರೀಕ್ಷೆಯಾಗಿತ್ತು. ಈ ಸಂದರ್ಭದಲ್ಲಿ ಮಾನೆಕ್‌ರವರ ಮೆದುಳಿನ ನಾಶವಾಗಿದ್ದ ಕೋಶಗಳು ಮತ್ತೆ ಚಿಗುರುತ್ತಿವೆ ಎಂಬುದು ವೈದ್ಯರ ಗಮನಕ್ಕೆ ಬಂದಿತು. ಸ್ಕ್ಯಾನ್ ಮಾಡಿದಾಗ ತೆಗೆದ 700 ಚಿತ್ರಗಳು ನ್ಯೂರಾನ್ ಚೇತರಿಸಿಕೊಂಡಿರುವುದರ ಸ್ಪಷ್ಟ ಚಿತ್ರಣವನ್ನು ನೀಡಿದ್ದವು. ನಾವು ಈಗಾಗಲೇ ನೋಡಿದಂತೆ ಪೈನಿಯಲ್ ಗ್ಲಾಂಡ್ ದೊಡ್ಡದಾಗಿರುವುದು (ಸಾಧಾರಣವಾಗಿ 6 ಮಿಲಿಮೀಟರ್- 6 ಮಿಲಿಮೀಟರ್ ಇರುವ ಅಂಗ 8 ಮಿಲಿಮೀಟರ್-10 ಮಿಲಿಮೀಟರ್ ಆಗಿತ್ತು) ಈ ವೇಳೆಯಲ್ಲಿ ಕಂಡು ಬಂದಿತು.

2002ರಲ್ಲಿ ಮಾನೆಕ್‌ರವರು ಅಮೆರಿಕಾದ 136 ಕಡೆ ಭಾಷಣವನ್ನು ಮಾಡಿದರು. ಅಮೆರಿಕಾದ ಸರಕಾರದ ಸಹಾಯದಿಂದ ಫ್ಲೋರಿಡಾದ ಆರ್ಲೆಂಡೋದಲ್ಲಿ ಸೂರ್ಯಪಾನದ ಅಂತರ್‌ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಿದರು. ಈಗಾಗಲೇ ಇವರು ಅಮೆರಿಕ, ಕೆನಡ, ಕೆರೇಬಿಯನ್ ದ್ವೀಪಗಳು, ಬ್ರಿಟಿಷ್ ದ್ವೀಪಗಳಲ್ಲಿ 147 ಭಾಷಣಗಳನ್ನು ಮಾಡಿದ್ದಾರೆ. 400 ಪತ್ರಿಕಾ ವರದಿಗಳು ವಿಶ್ವದಾದ್ಯಂತ ಮೂಡಿಬಂದಿವೆ. ಅನೇಕ ಟೆಲಿವಿಶನ್ ಚಾನೆಲ್‌ಗಳು ಇವರ ಸಂದರ್ಶನಗಳನ್ನು ಭಿತ್ತರಿಸಿವೆ. 2003ರಲ್ಲಿ ಭಾರತದಲ್ಲಿ ಇವರು ನಾಲ್ಕು ತಿಂಗಳ ಪ್ರವಾಸ-ಭಾಷಣ ಮಾಡಿದರು.

**ಸೂರ್ಯಪಾನದ ತಂತ್ರ :**

ಹೀರಾ ರತ್ನ್ ಮಾನೆಕ್‌ರವರು ಮರುಹುಟ್ಟು ನೀಡಿದ ಸೂರ್ಯಪಾನದ ತಂತ್ರವನ್ನು ಈಗ ನಾವು ನೋಡೋಣ. ಇದನ್ನು ಐದು ಅಂಶಗಳಾಗಿ ವಿಂಗಡಿಸಬಹುದು.

**ಸೂರ್ಯಪಾನವನ್ನು ಮಾಡುವ ಸಮಯ(ಯಾವಾಗ):**

ಸೂರ್ಯಪಾನವನ್ನು ಬೆಳಿಗ್ಗೆ ಸೂರ್ಯಹುಟ್ಟಿದ ಒಂದು





ಗಂಟೆಯೊಳಗೆ ಅಥವಾ ಸಂಜೆ ಸೂರ್ಯ ಮುಳುಗುವುದಕ್ಕೆ ಒಂದು ಘಂಟೆ ಮುಂಚೆ ಮಾಡಬಹುದು. ಈ ಸಮಯವನ್ನು ಬಿಟ್ಟು ಬೇರೆ ಸಮಯದಲ್ಲಿ ಸೂರ್ಯನನ್ನು ನೇರವಾಗಿ ದಿಟ್ಟಿಸಿ ನೋಡುವುದು ನಿಷಿದ್ಧ. ಸೂರ್ಯಪಾನ ಮಾಡುವವರು ಬೆಳಿಗ್ಗೆ ಅಥವಾ ಸಂಜೆಯ ಯಾವುದಾದರೂ ಒಂದು ಕಾಲವನ್ನು ಆರಿಸಿಕೊಳ್ಳಬಹುದು.

**ಸೂರ್ಯಪಾನದ ಕಾಲ (ಎಷ್ಟು) :**

ಆರಂಭ ಮಾಡಿದ ಮೊದಲ ದಿನ ಹತ್ತು ಸೆಕೆಂಡ್ ಕಾಲ ಸೂರ್ಯಪಾನ ಮಾಡಬೇಕು. ನಂತರ ಪ್ರತಿದಿನ ಹತ್ತು ಸೆಕೆಂಡ್‌ಗಳಷ್ಟು ಕಾಲ ಸೂರ್ಯನನ್ನು ದಿಟ್ಟಿಸಿ ನೋಡುವ ಸಮಯವನ್ನು ಹೆಚ್ಚಿಸುತ್ತಾ ಹೋಗಬೇಕು. ಅಂದತೆ ಎರಡನೆ ದಿನ ಇಪ್ಪತ್ತು ಸೆಕೆಂಡು, ಮೂರನೆಯ ದಿನ ಮೂವತ್ತು ಸೆಕೆಂಡು, ಹೀಗೆ ಇದರಿಂದ ಒಂದು ತಿಂಗಳು ಕಳೆಯುವ ವೇಳೆಗೆ ಐದು ನಿಮಿಷಗಳ ಸೂರ್ಯಪಾನ ಮಾಡುವ ಕ್ಷಮತೆ ನಿಮಗೆ ದೊರೆಯುತ್ತದೆ.

ಹೀಗೆಯೇ ಮುಂದುವರೆಸಿ, ಮೊದಲನೆಯ ಹಂತವಾದ ಮೂರು ತಿಂಗಳ ಅಂತ್ಯದಲ್ಲಿ ನಿಮಗೆ 15 ನಿಮಿಷಗಳ ಕಾಲ ಸೂರ್ಯಪಾನ ಸಿದ್ಧಿಸಿರುತ್ತದೆ. ಮತ್ತೆ ಮುಂದುವರೆಸಿ ಎರಡನೆಯ ಹಂತವಾದ ಆರನೆಯ ತಿಂಗಳವರೆಗೆ ಹೋಗಿ, ಆ ವೇಳೆಗೆ ನೀವು ಮೂವತ್ತು ನಿಮಿಷ ಸೂರ್ಯಪಾನವನ್ನು ಮಾಡಬಲ್ಲಿರಿ. ಮತ್ತೂ ಮುಂದುವರೆಸಿ ಮೂರನೆಯ ಹಂತವಾದ ಒಂಭತ್ತು ತಿಂಗಳನ್ನು ಮುಗಿಸಿರಿ. ಇದು ನಿಮ್ಮ ಕಡೆಯ ಹಂತ. ನೀವು ಆಗ ನಲವತ್ತೈದು ನಿಮಿಷಗಳ ಸೂರ್ಯಪಾನವನ್ನು ಮಾಡುವ ಹಂತವನ್ನು ಮುಟ್ಟಿರುತ್ತೀರಿ.

ನಿಮ್ಮ ಸೂರ್ಯಪಾನದ ಅಂತಿಮ ಹಂತವನ್ನು ನಲವತ್ತನಾಲ್ಕು ನಿಮಿಷಕ್ಕೆ ನಿಲ್ಲಿಸುವ ಸಲಹೆಯನ್ನು ಮಾನೆಕ್‌ರವರು ನೀಡುತ್ತಾರೆ. ಅವರ ಪ್ರಕಾರ ನೀವು ಮೂರನೆಯ ಹಂತವನ್ನು ಮುಟ್ಟಿದ ನಂತರ ಮತ್ತೆ ಸೂರ್ಯಪಾನವನ್ನು ಮುಂದುವರಿಸಬೇಕಾಗಿಲ್ಲ. ಅವರ ಪ್ರಕಾರ ಒಂದು ಬಾರಿ ಅಂತಿಮ ಹಂತ ಮುಟ್ಟಿ ನಿಲ್ಲಿಸಬಹುದಾದ ಪ್ರಕ್ರಿಯೆ ಇದು. ಒಮ್ಮೆ ಸೂರ್ಯಪಾನ ಸಿದ್ಧಿಸಿದ ನಂತರ ಮತ್ತೆ ಮತ್ತೆ ದೇಹವನ್ನು ರೀಚಾರ್ಜ್ ಮಾಡಬೇಕಾದ್ದಿಲ್ಲ. ದೇಹದ ಜೀವಕಣಗಳು ಸೂರ್ಯಕಿರಣವನ್ನು ಪಡೆದು, ಅದನ್ನು ದೇಹಕ್ಕೆ ಬೇಕಾದ ಶಕ್ತಿಯನ್ನಾಗಿ ಮಾರ್ಪಡಿಸುವ ತಂತ್ರವನ್ನು ಕಲಿತುಕೊಂಡು ಬಿಟ್ಟಿರುತ್ತದೆ.

**ಸೂರ್ಯಪಾನವನ್ನು ಮಾಡುವ ರೀತಿ (ಹೇಗೆ) :**

ಸೂರ್ಯಪಾನವನ್ನು ಬರಿಗಾಲಿನಲ್ಲಿ ನೆಲದ ಮೇಲೆ ನಿಂತು ಮಾಡಬೇಕು. ಪಾದ ನೆಲದ ಮಣ್ಣನ್ನೋ ಕಲ್ಲನ್ನೋ ಮುಟ್ಟುತ್ತಿರಬೇಕು. ಅಂದರೆ ಭೂಮಿಯ ಜೊತೆ ಸ್ಪಷ್ಟವಾಗಿ ಪಾದಸ್ಪರ್ಶವಾಗಬೇಕು. ನಮ್ಮ ದೇಹ ಒಂದು ಉತ್ತಮ ವಿದ್ಯುತ್‌ವಾಹಕ(Electrical Conductor) ಎಂಬುದು ನಿಮ್ಮ ಗಮನದಲ್ಲಿರಲಿ. ಸೂರ್ಯಪಾನ ಯಶಸ್ವಿಯಾಗಬೇಕಾದರೆ ನಿಮ್ಮ ದೇಹದ ಮೂಲಕ ಸೂರ್ಯಶಕ್ತಿ ಹಾದುಹೋಗುವಂತಾಗಬೇಕು. ಸೂರ್ಯನನ್ನು ಬರಿಗಣ್ಣಿನಿಂದ ದಿಟ್ಟಿಸಿ ನೋಡಬೇಕು.

ಶ್ರೀಮತಿ ಮಾನೆಕ್‌ರವರು ತಮ್ಮ ಪತಿ ಸೂರ್ಯಪಾನ ಮಾಡುವ ರೀತಿಯನ್ನು ವಿವರಿಸುತ್ತಾ- 'ಅವರು ಸೂರ್ಯನನ್ನು ನೋಡುವ ರೀತಿ ಪಾನೀಯವನ್ನು ಕುಡಿಯುವಂತಿರುತ್ತದೆ' ಎಂದು ಹೇಳಿದ್ದಾರೆ. ಸೂರ್ಯನನ್ನು ನೋಡುವಾಗ ಆದಷ್ಟು ರೆಪ್ಪೆ ಅಲುಗಿಸದೆ ನೋಡಬೇಕು. ಆದರೆ ಹಾಗೆಂದು ಸೂರ್ಯಪಾನ ಮಾಡುವಾಗ ರೆಪ್ಪೆ ಅಲುಗಿದರೆ ಚಿಂತೆ ಮಾಡುವ ಅಗತ್ಯವಿಲ್ಲ. ಅಭ್ಯಾಸ ಮುಂದುವರಿದಂತೆ, ಕಾಲಕ್ರಮೇಣ ಸೂರ್ಯನನ್ನು ರೆಪ್ಪೆ ಅಲುಗಿಸದೆ ದಿಟ್ಟಿಸಿ ನೋಡುವ ಕಲೆ ಸಿದ್ಧಿಸುತ್ತದೆ. ಸೂರ್ಯಪಾನದ ವೇಳೆ ಕಣ್ಣು ಸ್ಥಿರವಾಗದೆ ಅತ್ತಿತ್ತ ಓಡಾಡುತ್ತಿತ್ತು ಎಂಬ ಬಗ್ಗೆ ವ್ಯರ್ಥವಾಗಿ ಚಿಂತೆ ಮಾಡಬೇಡಿ.

**ಸೂರ್ಯಪಾನದ ಜೊತೆ ಮತ್ತೇನು ಮಾಡಬೇಕು? :**

ಸೂರ್ಯಪಾನದ ಜೊತೆಗೆ ಮತ್ತೊಂದು ಕ್ರಿಯೆಯನ್ನು ಅತ್ಯವಶ್ಯ ಎಂದು ಮಾನೆಕ್ ಅವರು ಪರಿಗಣಿಸುತ್ತಾರೆ. ಅದೇ 'ಕಾಲ್ನಡಿಗೆ'. ಅಂದರೆ ಬರೀ ಕಾಲಿನಲ್ಲಿ ಕಡೆಯ ಪಕ್ಷ ನಲವತ್ತೈದು ನಿಮಿಷಗಳ ಕಾಲ ನಡೆಯಬೇಕು ಎಂದು ಅವರು ಹೇಳುತ್ತಾರೆ. ಇದನ್ನು ಸೂರ್ಯಪಾನವನ್ನು ನಿಲ್ಲಿಸಿದ ನಂತರವೂ ನಾವು ಭೂಮಿಯ ಸಂಪರ್ಕದಲ್ಲಿರುವವರೆಗೆ ಮಾಡುತ್ತಿರಲೇಬೇಕು. ಹೀಗೆ ನಡೆಯುವಾಗ ಮರಳಿನ ನೆಲವನ್ನು ಆರಿಸಿಕೊಳ್ಳಿ. ಹುಲ್ಲು ಇರುವ ನೆಲ ಖಂಡಿತ ಬೇಡ. ಸಾಧಾರಣವಾದ ವೇಗವನ್ನು ನಿಮ್ಮ ನಡಿಗೆಗೆ ಆರಿಸಿಕೊಳ್ಳಿ. ಜಾಗಿಂಗ್ ಮಾಡುವವರಂತಾಗಲೀ, ಓಟದಲ್ಲಿ ಪಾಲುಗೊಳ್ಳುವವರಂತಾಗಲೀ ನೀವು ನಡೆಯಬೇಕಿಲ್ಲ. ನೀವು ನಡೆಯುವಾಗ ನಿಮ್ಮ ಪಾದ ನೆಲವನ್ನು ಸಂಪೂರ್ಣವಾಗಿ ಮುಟ್ಟುತ್ತಿರಲಿ. ಕಾಲ್ನಡಿಗೆಯನ್ನು ಯಾವಾಗ ಬೇಕಾದರೂ ಮಾಡಬಹುದಾದರೂ, ಸೂರ್ಯನ ಕಿರಣ ನೆಲಸ ಮೇಲೆ ಬೀಳುತ್ತಿರುವಾಗ ಮಾಡುವುದು ಒಳ್ಳೆಯ ಫಲಿತಾಂಶವನ್ನು ನೀಡುತ್ತದೆ.

**ಸೂರ್ಯಪಾನದ ಪ್ರಯೋಜನ :** ಸೂರ್ಯಪಾನವನ್ನು ಆರಂಭಿಸುತ್ತಿದ್ದಂತೆ ನಿಮ್ಮ ದೇಹದಲ್ಲಿ ಬದಲಾವಣೆ ಕಂಡು

ಬರುತ್ತದೆ. ಒಂದು ತಿಂಗಳಾಗುತ್ತಿದ್ದಂತೆಯೇ ನಿಮ್ಮ ದೇಹದಲ್ಲಿ ಲವಲವಿಕೆ ಕಂಡು ಬರುತ್ತದೆ. ಮೂರು ತಿಂಗಳ ಮೊದಲ ಹಂತ ಮುಟ್ಟುತ್ತಿದ್ದಂತೆ. ನಿಮ್ಮ ಸಣ್ಣಪುಟ್ಟ ಕಾಯಿಲೆಗಳು ಮಾಯವಾಗುತ್ತವೆ. ಆಹಾರದಲ್ಲಿ ಕಡಿತ ಮಾಡಬೇಕು ಎನಿಸುತ್ತದೆ. ದೇಹದಲ್ಲಿ ಆಲಸ್ಯ ಮಾಯವಾಗಿ ಬಿಡುತ್ತದೆ. ಆರು ತಿಂಗಳ ಎರಡನೆಯ ಹಂತ ದಾಟುತ್ತಿದ್ದಂತೆ ದೇಹದಲ್ಲಿ ಮಹತ್ತರ ಬದಲಾವಣೆ ಗೋಚರಿಸುತ್ತದೆ. ನಿಮ್ಮ ದೇಹದ ಹಿರಿಯ ಕಾಯಿಲೆಗಳು ಓಡಿಹೋಗಲು ಆರಂಭಿಸುತ್ತದೆ. ನಿಮಗೆ ಆಹಾರದ ವಿಷಯದಲ್ಲಿ ಅನಾಸಕ್ತಿ ಮೂಡುತ್ತದೆ. ಹಾಗಾಗಿ ನೀವು ತೆಗೆದುಕೊಳ್ಳುವ ಆಹಾರದ ಪ್ರಮಾಣ ಕಡಿಮೆಯಾಗುತ್ತದೆ. ಒಂಭತ್ತು ತಿಂಗಳ ಮೂರನೆಯ ಹಂತ ತಲುಪಿದ್ದಂತೆ ನಿಮಗೆ ಆಹಾರದ ಅಗತ್ಯ ಕಂಡುಬರುವುದಿಲ್ಲ. ನಿಮ್ಮ ಕಾಯಿಲೆಗಳೆಲ್ಲ ದೂರ ಓಡಿಹೋಗುತ್ತದೆ. ನಿಮ್ಮ ದೇಹ ಹಗುರವಾಗಿದ್ದು ನೀವು ಆರೋಗ್ಯದ ಅತ್ಯುಚ್ಚ ಮಟ್ಟವನ್ನು ಮುಟ್ಟುತ್ತೀರಿ. ಇದು ನಿಮ್ಮ ಆಧ್ಯಾತ್ಮಿಕ ಸಾಧನೆಯ ಹಂತವೂ ಆಗಬಹುದು. ದೈಹಿಕ, ಮಾನಸಿಕ ಹಾಗೂ ಆಧ್ಯಾತ್ಮಿಕ ಹಂತದ ಉನ್ನತ ಹಂತವನ್ನು ಮೂರನೆಯ ಹಂತದ ಕಡೆಯಲ್ಲಿ ನೀವು ಮುಟ್ಟಬಲ್ಲಿರಿ. ವಿಟಮಿನ್ 'ಎ' ಹಾಗೂ 'ಡಿ' ಇವೆರಡೂ ನೇರವಾಗಿ ಸೂರ್ಯಪಾನದ ವೇಳೆ ನಮ್ಮ ದೇಹಕ್ಕೆ ದೊರೆಯುತ್ತದೆ.

ಆದರೂ ಇವಿಷ್ಟೂ ಆಶಾವಾದದ ಮಾತುಗಳಾಗುತ್ತದೆ. ಸೂರ್ಯನ ದರ್ಶನಕ್ಕೆ ಮೋಡ ಅಡ್ಡಿ ಬರಬಹುದು. ಮಳೆ ಬರಬಹುದು. ಅಂತಹ ಸಂದರ್ಭಗಳಲ್ಲಿ ಎಂದಿನಂತೆ ಸೂರ್ಯಪಾನ ಮಾಡಲು ಆಗದಿರಬಹುದು; ಚಿಂತೆಯಿಲ್ಲ ಮೋಡದ ಹಿಂದೆ ಇರುವ ಸೂರ್ಯನ ಮಾರ್ಗವನ್ನು ಅಭ್ಯಾಸಬಲದಿಂದ ಈಗ ನೀವು ಗುರುತಿಸಬಲ್ಲಿರಿ. ಹಾಗಾಗಿ ಮೋಡ ಇರುವ ದಿನ ಎಂದಿನಂತೆ ಸೂರ್ಯಪಾನ ಮಾಡಿ ಆದರೆ ನಿಮ್ಮ ಸೂರ್ಯಪಾನದ ಹೆಚ್ಚಿಸಬೇಕಾದ ಹತ್ತು ಸೆಕೆಂಡ್ ಕಾಲವನ್ನು ಅಂದು ಹೆಚ್ಚಿಸಬೇಡಿ.

**ಕಣ್ಣಿನ ವೈದ್ಯರಿಂದ ಪರೀಕ್ಷೆ :**

ಈ ತೆರನಾದ ಸೂರ್ಯಪಾನದಿಂದ ಕಣ್ಣಿಗೆ ಯಾವುದೇ ತೊಂದರೆಯಾಗುವುದಿಲ್ಲ. ಬದಲಾಗಿ ಕಣ್ಣಿನ ದೋಷಗಳು ನಿವಾರಣೆಯಾಗುತ್ತವೆ. ಏನೇ ಆಗಲಿ ಸೂರ್ಯಪಾನವನ್ನು ಆರಂಭಿಸುವ ಮೊದಲು ಕಣ್ಣಿನ ವೈದ್ಯರಿಗೆ ನಿಮ್ಮ ಕಣ್ಣಿನ ಸ್ಥಿತಿಯನ್ನು ತೋರಿಸಿ, ಸೂರ್ಯಪಾನ ಆರಂಭಿಸಿದ ನಂತರ ಮೂರು ತಿಂಗಳಿಗೊಮ್ಮೆ ನಿಮ್ಮ ಕಣ್ಣಿನ ಪರೀಕ್ಷೆ ಮಾಡಿಸಿ ಕೊಳ್ಳುತ್ತಿರಿ. ಇದರಿಂದ ನಿಮ್ಮ ಕಣ್ಣಿನಲ್ಲಾದ ಉತ್ತಮ ಬದಲಾವಣೆ ನಿಮಗೇ ಗೊತ್ತಾಗುತ್ತದೆ.

**ಸಾರಾಂಶ :**

ಸೂರ್ಯಪಾನವನ್ನು ಋಷಿಮುನಿಗಳು, ದೇವತೆಗಳು ನಿರಾಹಾರ ಜೀವನವನ್ನು ಅಳವಡಿಸಿಕೊಳ್ಳಲು ಸಾಧಿಸಿಕೊಂಡಿದ್ದ ತಂತ್ರ. ಅದನ್ನು ಮತ್ತೆ ಹೀರಾ ರತನ್ ಮಾನೆಕ್ ರವರು ಜಗತ್ತಿಗೆ ಮರಿಪರಿಚಯ ಮಾಡಿಸಿದ್ದಾರೆ. ಇದರಿಂದ ದೈಹಿಕ ಆರೋಗ್ಯವನ್ನು ಪಡೆಯುವುದಲ್ಲದೆ ಮನುಷ್ಯನ ಆಹಾರದ ಮೇಲಿನ ಅವಲಂಬನೆ ತಪ್ಪುತ್ತದೆ. ಸೂರ್ಯಪಾನದ ಸಿದ್ಧಿ ಪಡೆಯುವುದರಿಂದ ದೈಹಿಕ ಆರೋಗ್ಯ ಮಾತ್ರವಲ್ಲದೆ ಮಾನಸಿಕ ಆರೋಗ್ಯವನ್ನು, ಆಧ್ಯಾತ್ಮದಲ್ಲಿ ಪ್ರಗತಿಯನ್ನು ಸಾಧಿಸಬಹುದು.

*

## ಸೋಮೇಶ್ವರ ಶತಕ

ತೆರನಂ ಕಾಣದ ಬಾಳ್ಕೆಯಲ್ಪಮತಿ
ಕ್ಷುದ್ರಾರಂಭಮಲ್ಪಾಶ್ರಯಂ ।
ಕಿರುದೋಟಂ ಕಡೆವಳ್ಳಿ ಬೀಳುಮನೆ
ಮುಂಗೆಯ್ವಾರ್ಭಟಂ ಸಾಲದಾ ॥
ದೊರೆ ಕಾರ್ಯಂ ಘೃತಮಿಲ್ಲದೂಟದ ಸುಖಂ
ದುರ್ಮಾರ್ಗರೊಳ್ ಸ್ನೇಹಮುಂ ।
ಬರಿಗೈಯಂ ಸುರಿದಂತೆಲ್ಲೆ ಹರಹರಾ
ಶ್ರೀ ಚೆನ್ನಸೋಮೇಶ್ವರಾ ॥

ರೀತಿಗೆಟ್ಟ ಬದುಕು, ಅಲ್ಪಬುದ್ಧಿ, ಅಲ್ಪಕಾರ್ಯವನ್ನು ಹಿಡಿಯುವುದು, ನೀಚರನ್ನು ಆಶ್ರಯಿಸುವುದು, ಸಣ್ಣ ತೋಟ, ತೀರ ಕೊನೆಯಲ್ಲಿರುವ ಹಳ್ಳಿ, ಹಾಳಾಗುತ್ತಿರುವ ಮನೆ, ಮೊದಲಿಗೆ ಮಾಡುವ ಗದ್ದಲ(ಆರಂಭಶೂರತ್ವ), ಸಾಲ ಮಾಡಿ ಮಾಡುವ ಆಡಂಬರದ ಕೆಲಸ, ತುಪ್ಪವಿಲ್ಲದ ಊಟ, ದುರ್ಮಾಗರಲ್ಲಿ ಸ್ನೇಹ– ಇವೆಲ್ಲವೂ ವ್ಯರ್ಥವು.

## ವಚನ

ಇಂದ್ರಿಯಂಗಳ ಕೊಂದಿಹನೆಂದಡೆ ಅವು
ಕಂಪರ್ಪನ ಹಂಗು ; ಕಂದರ್ಪನ
ಕೊಂದಿಹೆನೆಂದೊಡೆ ಅವು ಕಂಗಳ ಲಾಭ ;
ಕಂಗಳು ಮುಚ್ಚೆಯಲ್ಲದೆ ಲಿಂಗವ ಕಾಣಬಾರದು.
ಅದು ನಿರಂಗಂಗಲ್ಲದೆ ಜಗದ ಹಂಗಿನವರಿಗಿಲ್ಲ
ಎಂದೆ ಗೌರೇಶ್ವರಾ

–ಮೇದಾರ ಕೇತಯ್ಯ

## ಪ್ರಕೃತಿ ಚಿಕಿತ್ಸೆ

# ನಿಸರ್ಗೋಪಚಾರದಲ್ಲಿ ಸ್ನಾನದ ಸ್ಥಾನ


–ಜಿ.ವಿ.ವಿ. ಶಾಸ್ತ್ರಿ

'ನಿಸರ್ಗ ಯೋಗಧಾಮ' ನಂ. ೨/೨೦೫೫, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.


**ಶರೀರದ ಮೇಲೆ ತಣ್ಣೀರಿನ ಪರಿಣಾಮ:**

ಚರ್ಮದ ಮೇಲೆ ತಣ್ಣೀರು ಬಿದ್ದ ತಕ್ಷಣ ಮೇಲ್ಪದರದಲ್ಲಿ ಶಾಖ ಕಡಿಮೆಯಾಗುತ್ತದೆ. ಅದಕ್ಕೆ ಪ್ರತಿಕ್ರಿಯೆಯಾಗಿ ರಕ್ತವು ಶಾಖ ಹೆಚ್ಚಿರುವ ಒಳ ಅಂಗಗಳಿಂದ ಮೇಲ್ಪದರಕ್ಕೆ ನುಗ್ಗುತ್ತದೆ. ಇದರಿಂದ ಚರ್ಮದ ಮೇಲ್ಪದರದಲ್ಲಿ ಶಾಖ ಹೆಚ್ಚುತ್ತದೆ. ಶಾಖ, ಕಡಿಮೆಯಾಗುವಿಕೆ ಮೊದಲ ಪರಿಣಾಮ, ಇದು ತಾತ್ಕಾಲಿಕ, ನಂತರ ಶಾಖ ಹೆಚ್ಚುವಿಕೆ ಎರಡನೆಯ ಪರಿಣಾಮ, ಇದು ಶಾಶ್ವತ. ಆದ್ದರಿಂದಲೇ ತಣ್ಣೀರಿನ ಸ್ನಾನವು ಹೊರಗಿನ ವಾತಾವರಣಕ್ಕಿಂತ ಶರೀರದ ಶಾಖವನ್ನು ಹೆಚ್ಚಿಸಿ ಚಳಿಯನ್ನು ಹೋಗಲಾಡಿಸುತ್ತದೆ. ಅಲ್ಲದೆ ರಕ್ತದ ಜೊತೆಯಲ್ಲಿಯೇ ಕೊಳೆಯನ್ನು ಒಳ ಅಂಗಗಳಿಂದ ಮೇಲಕ್ಕೆ ಎಳೆಯುತ್ತದೆ. ಅದೇ ಬಿಸಿನೀರಿನ ಸ್ನಾನದಿಂದ ಕೊಳೆಯು ಒಳ ಅಂಗಗಳಿಗೆ ತಳ್ಳಲ್ಪಡುತ್ತದೆ ಎನ್ನುವುದು ಲಿಂಡ್ಲರ್‌ರವರ ವಾದ. ಆದ್ದರಿಂದ ಸ್ನಾನಕ್ಕೆ ತಣ್ಣೀರೇ ಉತ್ತಮವೆಂದು ಅವರ ಮತ. ಬಹಳ ಜನ ನಿಸರ್ಗಚಿಕಿತ್ಸಕರ ಅಭಿಮತವೂ ಅದೇ ಆಗಿದೆ. ಬಿಸಿನೀರಿನ ಸ್ನಾನ ರಕ್ತನಾಳಗಳ, ನರಮಂಡಲದ ಶಕ್ತಿಯನ್ನು ಕುಂದಿಸುವುದೆನ್ನುವುದೇ ಇವರೆಲ್ಲರ ಅಭಿಪ್ರಾಯ.

ಆದರೆ, ಡಾ॥ ಪ್ಯಾಟ್ರಿಕ್ ಹೋರೆ ಮತ್ತು ಡಾ॥ ಡೇವಿಡ್ ಹಾರ್ಪ್‌ರವರು ತಮ್ಮ ಹಾಟ್ ವಾಟರ್ ಥೆರಪಿ(Hot water therapy) ಎಂಬ ಪುಸ್ತಕದಲ್ಲಿ ಬಿಸಿನೀರಿನ ಹೆಗ್ಗಳಿಕೆಯನ್ನು ಪಟ್ಟಿ ಮಾಡಿದ್ದಾರೆ.

1. ತಾತ್ಕಾಲಿಕ ರಕ್ತದೊತ್ತಡ ಹೆಚ್ಚುವಿಕೆ, ನಂತರ ರಕ್ತದೊತ್ತಡ ಇಳಿತ.
2. ತೋರಿಕೆಯ ರಕ್ತದೊತ್ತಡದ ಹೆಚ್ಚಳ.
3. ಮಾಂಸಖಂಡಗಳಿಗೆ ಹೆಚ್ಚು ರಕ್ತದ ಪೂರೈಕೆ.
4. ಮಾಂಸಖಂಡಗಳಿಗೆ ಸೆಳೆತವನ್ನು ತಗ್ಗಿಸಿ ವಿಶ್ರಾಂತಿ ಕೊಡುತ್ತದೆ.
5. ಹೃದಯದ ಬಡಿತವನ್ನು ಹೆಚ್ಚಿಸುತ್ತದೆ.
6. ನಾಳಗಳಲ್ಲಿ ಹೆಚ್ಚಿದ ರಕ್ತ ಅದನ್ನು ವಿಸ್ತರಿಸುತ್ತದೆ.
7. ಹೆಚ್ಚು ಬೆವರು, ಅದರಿಂದ ಕಲ್ಮಶ ನಿವಾರಣೆ.
8. ಆಮ್ಲಜನಕ ಹೆಚ್ಚುವುದರಿಂದ ಜೀವಸ್ತುಚಯ (Anabolism) ಹೆಚ್ಚುತ್ತದೆ.
9. ಶ್ವಾಸೋಚ್ಛ್ವಾಸ ವೇಗದ ಹೆಚ್ಚಳ.
10. ಶರೀರದ ರಕ್ಷಣ ವ್ಯವಸ್ಥೆಯ ಉತ್ತೇಜನ ಮತ್ತು ಜೀವಿರೋಧಕಗಳ ಹೆಚ್ಚಳ. (Stimulation of immune sytem and improved antibody production)
11. ಪಿತ್ತಕೋಶದ ಉತ್ತೇಜನೆ ಮತ್ತು ಲ್ಯಾಕ್ಟಿಕ್ ಆಮ್ಲದ ಪರಿವರ್ತನೆ.
12. ಅರಿವಿನ ನರಕಣಗಳ ಪ್ರಶಾಂತತೆ, ಅದರಿಂದ ನೋವು ನಿವಾರಣೆ, (Sedatiob of sensory and motor nerves and pain relief)

ಬಿಗುವಿನಿಂದ ಕೂಡಿದ್ದ ಮಾಂಸಖಂಡಗಳು ಮೃದುವಾಗುತ್ತದೆ. ವಿಶ್ರಾಂತಿ ಪಡೆಯುತ್ತವೆ. ಆಗ ಅವುಗಳನ್ನು ಚೆನ್ನಾಗಿ ಎಳೆಯಬಹುದು ಹಾಗೂ ವ್ಯಾಯಾಮಕ್ಕೆ ಒಳಪಡಿಸಬಹುದು. ಆಮ್ಲಜನಕದ ಹೆಚ್ಚು ಉಪಯೋಗ ಪಡೆದು ಕಲ್ಮಶಗಳು ಹೆಚ್ಚು ಹೊರಹಾಕಲ್ಪಡುತ್ತವೆ. ಈ ಕಾರಣಗಳಿಂದ ನೋವು ನಿವಾರಣೆಯಲ್ಲಿ ಬಿಸಿನೀರು ತಣ್ಣೀರಿಗಿಂತ ಹೆಚ್ಚು ಉಪಯುಕ್ತ ಎನ್ನುವುದು ಇವರ ವಾದ. ಇಬ್ಬರು ಹೇಳುವುದರಲ್ಲೂ ಅರ್ಥವಿದೆ. ಬಿಸಿನೀರು ಔಷಧವಾಗಿ ಕೆಲಸ ಮಾಡುತ್ತದೆ. ಅದೇ ತಣ್ಣೀರು ನರನಾಡಿಗಳಿಗೆ ತ್ರಾಣವನ್ನು ನೀಡುತ್ತದೆ. ಆಯಾ ಕಾಯಿಲೆಗಳಿಗೆ, ವ್ಯಕ್ತಿಗಳಿಗೆ, ವಾತಾವರಣಕ್ಕೆ ಅನುಗುಣವಾಗಿ ಅವುಗಳ ಅವಶ್ಯಕತೆಯನ್ನು ಅರಿತು, ತಣ್ಣೀರು ಅಥವಾ ಬಿಸಿನೀರನ್ನು ಅಂಗಾಂಗ ಸ್ನಾನಗಳು, ಜಲಧಾರೆ, ಪಟ್ಟಿಗಳು, ಇತ್ಯಾದಿಗಳ ಮುಖಾಂತರ ಬಳಸಿಕೊಂಡು ನಿಸರ್ಗೋಪಚಾರ ಮಾಡಿಕೊಳ್ಳಬಹುದು/ಮಾಡಬೇಕು. ಈಗ ಅವುಗಳನ್ನು ಒಂದೊಂದಾಗಿ ಚಿಂತಿಸುವ.

–ಮುಂದುವರೆಯುತ್ತದೆ.

**ಶ್ರೀವಾಣಿ**

ಸಂಪತ್ತಿನ ಹಂಚಿಕೆಯೆಂಬುದು ಸಮಪ್ರಮಾಣದಲ್ಲಿರುವಂತೆ ನೋಡಿಕೊಳ್ಳುವುದು ಪ್ರಜಾಪ್ರಭುತ್ವದ ಕರ್ತವ್ಯ

RNI No. 17139/69 "Siddaganga" Monthly - Postal Reg. No. KA/SK/TMR/385/2009-11

ಜೀವನದಲ್ಲಿ ಕಾಲವನ್ನು ಅಮೂಲ್ಯವೆಂದು ತಿಳಿಯುವುದೇ, ತಿಳಿದು ಆಚರಿಸುವುದೇ ನಿಜವಾದ ಜ್ಞಾನ.

— ಶ್ರೀವಾಣಿ



## 2009 ರಜಾ ದಿನಗಳು

ಜನವರಿ : 8 – ಮೊಹರಂ ಕಡೆದಿನ
14 – ಮಕರ ಸಂಕ್ರಾಂತಿ
26 – ಗಣರಾಜ್ಯೋತ್ಸವ

ಫೆಬ್ರವರಿ : 23 – ಮಹಾಶಿವರಾತ್ರಿ

ಮಾರ್ಚ್ : 10 – ಈದ್-ಮಿಲಾದ್
27 – ಚಾಂದ್ರಮಾನ ಯುಗಾದಿ

ಏಪ್ರಿಲ್ : 7 – ಮಹಾವೀರ ಜಯಂತಿ
10 – ಗುಡ್‌ಫ್ರೈಡೆ
14 – ಡಾ. ಅಂಬೇಡ್ಕರ್ ಜಯಂತಿ
27 – ಬಸವೇಶ್ವರ ಜಯಂತಿ

ಮೇ : 1 – ಕಾರ್ಮಿಕರ ದಿನಾಚರಣೆ

ಆಗಸ್ಟ್ : 15 – ಸ್ವಾತಂತ್ರ್ಯ ದಿನಾಚರಣೆ
23 – ವಿನಾಯಕ ಚತುರ್ಥಿ

ಸೆಪ್ಟೆಂಬರ್ : 18 – ಮಹಾಲಯ ಅಮಾವಾಸ್ಯೆ
21 – ರಂಜಾನ್
27 – ಆಯುಧ ಪೂಜೆ
28 – ವಿಜಯದಶಮಿ

ಅಕ್ಟೋಬರ್ : 2 – ಗಾಂಧಿ ಜಯಂತಿ
17 – ನರಕ ಚತುರ್ದಶಿ
19 – ದೀಪಾವಳಿ

ನವೆಂಬರ್ : 1 – ಕನ್ನಡ ರಾಜ್ಯೋತ್ಸವ
5 – ಕನಕದಾಸರ ಜಯಂತಿ
28 – ಬಕ್ರೀದ್

ಡಿಸೆಂಬರ್ : 25 – ಕ್ರಿಸ್‌ಮಸ್
28 – ಮೊಹರಂ ಕಡೆದಿನ

### ಜನವರಿ 2009

| | | | | | |
|---|---|---|---|---|---|
| ಭಾನು | * | 4 | 11 | 18 | 25 |
| ಸೋಮ | * | 5 | 12 | 19 | 26 |
| ಮಂಗಳ | * | 6 | 13 | 20 | 27 |
| ಬುಧ | * | 7 | 14 | 21 | 28 |
| ಗುರು | 1 | 8 | 15 | 22 | 29 |
| ಶುಕ್ರ | 2 | 9 | 16 | 23 | 30 |
| ಶನಿ | 3 | 10 | 17 | 24 | 31 |

### ಫೆಬ್ರವರಿ 2009

| | | | | | |
|---|---|---|---|---|---|
| ಭಾನು | 1 | 8 | 15 | 22 | * |
| ಸೋಮ | 2 | 9 | 16 | 23 | * |
| ಮಂಗಳ | 3 | 10 | 17 | 24 | * |
| ಬುಧ | 4 | 11 | 18 | 25 | * |
| ಗುರು | 5 | 12 | 19 | 26 | * |
| ಶುಕ್ರ | 6 | 13 | 20 | 27 | * |
| ಶನಿ | 7 | 14 | 21 | 28 | * |

### ಮಾರ್ಚ್ 2009

| | | | | | |
|---|---|---|---|---|---|
| ಭಾನು | 1 | 8 | 15 | 22 | 29 |
| ಸೋಮ | 2 | 9 | 16 | 23 | 30 |
| ಮಂಗಳ | 3 | 10 | 17 | 24 | 31 |
| ಬುಧ | 4 | 11 | 18 | 25 | * |
| ಗುರು | 5 | 12 | 19 | 26 | * |
| ಶುಕ್ರ | 6 | 13 | 20 | 27 | * |
| ಶನಿ | 7 | 14 | 21 | 28 | * |

### ಏಪ್ರಿಲ್ 2009

| | | | | | |
|---|---|---|---|---|---|
| ಭಾನು | * | 5 | 12 | 19 | 26 |
| ಸೋಮ | * | 6 | 13 | 20 | 27 |
| ಮಂಗಳ | * | 7 | 14 | 21 | 28 |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | * |
| ಶನಿ | 4 | 11 | 18 | 25 | * |

### ಮೇ 2009

| | | | | | |
|---|---|---|---|---|---|
| ಭಾನು | 31 | 3 | 10 | 17 | 24 |
| ಸೋಮ | * | 4 | 11 | 18 | 25 |
| ಮಂಗಳ | * | 5 | 12 | 19 | 26 |
| ಬುಧ | * | 6 | 13 | 20 | 27 |
| ಗುರು | * | 7 | 14 | 21 | 28 |
| ಶುಕ್ರ | 1 | 8 | 15 | 22 | 29 |
| ಶನಿ | 2 | 9 | 16 | 23 | 30 |

### ಜೂನ್ 2009

| | | | | | |
|---|---|---|---|---|---|
| ಭಾನು | * | 7 | 14 | 21 | 28 |
| ಸೋಮ | 1 | 8 | 15 | 22 | 29 |
| ಮಂಗಳ | 2 | 9 | 16 | 23 | 30 |
| ಬುಧ | 3 | 10 | 17 | 24 | * |
| ಗುರು | 4 | 11 | 18 | 25 | * |
| ಶುಕ್ರ | 5 | 12 | 19 | 26 | * |
| ಶನಿ | 6 | 13 | 20 | 27 | * |

### ಜುಲೈ 2009

| | | | | | |
|---|---|---|---|---|---|
| ಭಾನು | * | 5 | 12 | 19 | 26 |
| ಸೋಮ | * | 6 | 13 | 20 | 27 |
| ಮಂಗಳ | * | 7 | 14 | 21 | 28 |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | 31 |
| ಶನಿ | 4 | 11 | 18 | 25 | * |

### ಆಗಸ್ಟ್ 2009

| | | | | | |
|---|---|---|---|---|---|
| ಭಾನು | 30 | 2 | 9 | 16 | 23 |
| ಸೋಮ | 31 | 3 | 10 | 17 | 24 |
| ಮಂಗಳ | * | 4 | 11 | 18 | 25 |
| ಬುಧ | * | 5 | 12 | 19 | 26 |
| ಗುರು | * | 6 | 13 | 20 | 27 |
| ಶುಕ್ರ | * | 7 | 14 | 21 | 28 |
| ಶನಿ | 1 | 8 | 15 | 22 | 29 |

### ಸೆಪ್ಟೆಂಬರ್ 2009

| | | | | | |
|---|---|---|---|---|---|
| ಭಾನು | * | 6 | 13 | 20 | 27 |
| ಸೋಮ | * | 7 | 14 | 21 | 28 |
| ಮಂಗಳ | 1 | 8 | 15 | 22 | 29 |
| ಬುಧ | 2 | 9 | 16 | 23 | 30 |
| ಗುರು | 3 | 10 | 17 | 24 | * |
| ಶುಕ್ರ | 4 | 11 | 18 | 25 | * |
| ಶನಿ | 5 | 12 | 19 | 26 | * |

### ಅಕ್ಟೋಬರ್ 2009

| | | | | | |
|---|---|---|---|---|---|
| ಭಾನು | * | 4 | 11 | 18 | 25 |
| ಸೋಮ | * | 5 | 12 | 19 | 26 |
| ಮಂಗಳ | * | 6 | 13 | 20 | 27 |
| ಬುಧ | * | 7 | 14 | 21 | 28 |
| ಗುರು | 1 | 8 | 15 | 22 | 29 |
| ಶುಕ್ರ | 2 | 9 | 16 | 23 | 30 |
| ಶನಿ | 3 | 10 | 17 | 24 | 31 |

### ನವೆಂಬರ್ 2009

| | | | | | |
|---|---|---|---|---|---|
| ಭಾನು | 1 | 8 | 15 | 22 | 29 |
| ಸೋಮ | 2 | 9 | 16 | 23 | 30 |
| ಮಂಗಳ | 3 | 10 | 17 | 24 | * |
| ಬುಧ | 4 | 11 | 18 | 25 | * |
| ಗುರು | 5 | 12 | 19 | 26 | * |
| ಶುಕ್ರ | 6 | 13 | 20 | 27 | * |
| ಶನಿ | 7 | 14 | 21 | 28 | * |

### ಡಿಸೆಂಬರ್ 2009

| | | | | | |
|---|---|---|---|---|---|
| ಭಾನು | * | 6 | 13 | 20 | 27 |
| ಸೋಮ | * | 7 | 14 | 21 | 28 |
| ಮಂಗಳ | 1 | 8 | 15 | 22 | 29 |
| ಬುಧ | 2 | 9 | 16 | 23 | 30 |
| ಗುರು | 3 | 10 | 17 | 24 | 31 |
| ಶುಕ್ರ | 4 | 11 | 18 | 25 | * |
| ಶನಿ | 5 | 12 | 19 | 26 | * |

ಕರುನಾಡ ಪುಣ್ಯವೇ ಭರತ ಭೂಮಿಯ ಭಾಗ್ಯ
ಮನುಕುಲದ ಮಂಗಳದ ಶಿವನಿಧಿಯೆ । ಪೊಡಮಡುವೆ
ಸಿದ್ಧಗಂಗಾ ಗುರುವೇ ಕೃಪೆಯಾಗು

ಪರಮಪುರುಷಾಕಾರ ಪರಮಾನಂದ ರೂಪ
ಪರಮಾತ್ಮ ಲಿಂಗವೇ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೇ ಕೃಪೆಯಾಗು

ಉಂಡು ತೇಗಿತು ಲೋಕ ಕೊಂಡಾಡಿ ದಾಸೋಹ
ಕಂಡಕಂಡಲ್ಲಿ ನಿನ್ನ ಮಾತು । ನನ್ನ ತಂದೆ
ಸಿದ್ಧಗಂಗಾ ಗುರುವೇ ಕೃಪೆಯಾಗು